ಸುಪ್ರಸಿದ್ಧ ಪಠಾಣವೀರನಾದ

# ಶೇರಶಹ.



-ಃ ಲೇಖಕ ಃ-

ಮಹಾದೇವ ಪ್ರಭಾಕರ ಪೂಜಾರ

ಅಸಿಸ್ಟಂಟ ಮಾಸ್ತರ ಟ್ರೇನಿಂಗ ಕಾಲೇಜ,

ಧಾರವಾಡ.



ದ್ವಿತೀಯಾವೃತ್ತಿ

೧೯೩೮.



ಬೆಲೆ ೪ ಆಣೆ.

## ಮುಂಬಯಿ ವಿದ್ಯಾಖಾತೆಯಿಂದ ಮಂಜೂರಾದ

## ಈ ಗ್ರಂಥಕರ್ತೃವಿನ ಬೇರೆ ಪುಸ್ತಕಗಳು.



(೧) **ರಾಮಾಶ್ವಮೇಧ ಸಾರ ಸಂಗ್ರಹ**— ಇದು ಹಳಗನ್ನಡದ ಸುಪ್ರಸಿದ್ಧ ಗದ್ಯ ಕಾವ್ಯವಾದ ರಾಮಾಶ್ವಮೇಧದ ಸಾರವು. ವಿಸ್ತೃತ ಟಿಪ್ಪಣಿಯಿಂದ ಕೂಡಿದ್ದು. ಟೆಕ್ಸ್ಟ. ೧—೦—೦

(೨) **ದುರ್ಗಸಿಂಹ ಪಂಚತಂತ್ರ ಸಾರ**— ದುರ್ಗಸಿಂಹ ಕವಿಯ ಪಂಚತಂತ್ರದ ಸರಳಾನುವಾದವು. ವಿಸ್ತೃತ ಟಿಪ್ಪಣಿಯಿಂದ ಕೂಡಿದ್ದು. ಹಳಗನ್ನಡವನ್ನು ಅಭ್ಯಾಸಿಸುವವರಿಗೆ ಈ ಎರಡು ಪುಸ್ತಕಗಳು ಅತ್ಯುಪಯುಕ್ತವಾದುವು. ಟೆಕ್ಸ್ಟ. ೧—೦—೦

(೩) **ಅಶೋಕ**— ಬೌದ್ಧಯುಗದ ಧರ್ಮದ ಇತಿಹಾಸವನ್ನೊಳಗೊಂಡ ಭಾರತೀಯ ಚಕ್ರವರ್ತಿಯ ಚರಿತ್ರವು. ೧—೬—೦

(೪) **ಸತ್ಕಥಾಲಾಪ**— ಮನಸ್ಸಿನ ಮೇಲೆ ನೀತಿಯ ಒಂದೊಂದು ಮಾತಿನ ಪರಿಣಾಮವಾಗುವಂತೆ ಒಂದೊಂದು ಕಥೆಯನ್ನು ಸುಲಭ ಭಾಷೆಯಲ್ಲಿ ಬರೆದು ಸಂಗ್ರಹೀತವಾಗಿದೆ. ಟೆಕ್ಸ್ಟ. ೦—೧೦—೦

(೫) **ಹಜರತ ಮಹಮ್ಮದ ಪೈಗಂಬರ**— ಮುಸಲ್ಮಾನಿ ಧರ್ಮ ಸ್ಥಾಪಕನ ಪವಿತ್ರ ಚರಿತ್ರವು. ಪ್ರಾಯಿಜ್ ಲಾಯಬ್ರರಿಗಳಿಗಾಗಿ. ೦—೬—೦

(೬) **ಮೊಹರಮ್**— ಮೊಹರಮ್ಮದ ಶೋಕರಸಪೂರ್ಣವಾದ ಕಥೆ. ಪ್ರಾಯಿಜ್ ಲಾಯಬ್ರರಿಗಳಿಗಾಗಿ. ೦—೩—೦

(೭) **ಮದುವೆ**— ಮದುವೆಯನ್ನು ಕುರಿತು ಹಿಂದು ಧರ್ಮವು ಹೇಳುವ ವಿಚಾರಗಳು. ೦—೨—೦

(೮) **ಸತಿಯೂ, ಸುನೀತಿಯೂ**— ದಕ್ಷ ಪುತ್ರಿಯಾದ ಸತಿ, ಉತ್ತಾನ ರಾಜನ ಪತ್ನಿಯಾದ ಸುನೀತಿ ಈ ಪತಿವ್ರತೆಯರಿಬ್ಬರ ಸುರಸ ಚರಿತ್ರೆಗಳು. ೦—೪—೦

(೯) **ಭಾರತೀಯ ವಿದುಷಿಯರು**— ವೇದಕಾಲ ಮೊದಲ್ಗೊಂಡು ಅರ್ವಾಚೀನ ಕಾಲದ ವರೆಗೆ ಆಗಿಹೋದ ವಿದುಷೀ ಸ್ತ್ರೀಯರ ಚರಿತ್ರೆಗಳು. ಪ್ರಾಯಿಜ್ ಲಾಯಬ್ರರಿಗಳಿಗಾಗಿ. ೦—೫—೦

(೧೦) **ಜೈನ ಪದ್ಮ ಪುರಾಣ ಸಾರ**— ಜೈನರ ರಾಮಾಯಣದ ಸಾರವು. ಪ್ರಾಯಿಜ್ ಲಾಯಬ್ರರಿಗಳಿಗಾಗಿ. ೦—೬—೦

ಈ ಪುಸ್ತಕಗಳು ಗ್ರಂಥಕರ್ತರಲ್ಲಿಯೂ, ಮಿ. ಕೆ. ಬಿ. ಕುಕನೂರ ಕ. ವಿ. ಸಂಘ ಇವರಲ್ಲಿಯೂ ದೊರೆಯುವವು.

೭, ೮, ಈ ಎರಡು ಪುಸ್ತಕಗಳು ಮಂಜೂರಿಗೆ ಕಳಿಸಲ್ಪಟ್ಟಿಲ್ಲ.

# ಶೇರಶಹ.



೧



**ಸಾಸೇರಾಮದ** ಜಹಾಗೀರದಾರನಾದ ಪಠಾಣ ಹುಸೇನಖಾನನು ಪಡಸಾಲೆಯ ಮುಂದಿನ ಅಂಗಳದಲ್ಲಿ ಕುಳಿತುಕೊಂಡು ಒಬ್ಬ ಸಿದ್ಧಪುರುಷನಾದ ಫಕೀರನಿಗೆ ತನ್ನ ಹಸ್ತವನ್ನು ತೋರಿಸುತ್ತಿದ್ದನು.

ಫಕೀರನ ತಲೆಯಮೇಲೆ ಬಿಳಿಯ ಜಡೆಯು ಒಪ್ಪುತ್ತಿತ್ತು. ಎದೆಯ ವರೆಗೆ ಜೋಲಾಡುವ ಗಡ್ಡಗಳು ನಸುಗಾಳಿಯಿಂದ ಸ್ವಲ್ಪ ಅಲ್ಲಾಡುತ್ತಿದ್ದವು. ಮೈಯು ಪುಟಹಾಕಿದ ಚಿನ್ನದಂತೆ ಹೊಳೆಯುತ್ತಿತ್ತು. ಇಷ್ಟು ವಯಸ್ಸಾಗಿದ್ದರೂ ಮುಪ್ಪಿಗೆ ಅವನ ಗಟ್ಟಿಯಾದ ಮೈಮೇಲೆ ಏರಿಬರುವದಕ್ಕೆ ಆಗಿರಲಿಲ್ಲ.

ಫಕೀರನು ತನ್ನ ಎಡಗೈಯಿಂದ ಹುಸೇನಖಾನನ ಬಲಗೈಯನ್ನು ಹಿಡಿದುಕೊಂಡು ಅಂಗೈ ಗೆರೆಗಳನ್ನು ನೋಡುತ್ತಿದ್ದನು. ನೋಡುತ್ತ ನೋಡುತ್ತ ಆ ಸಿದ್ಧಪುರುಷನ ಮೋರೆ ಹಿಗ್ಗಿತು. ಆಗ ಅವನು-"ಪಠಾಣ, ನಿನ್ನ ಪುತ್ರಸ್ಥಾನದಲ್ಲಿ ಬಹಳ ಭಾಗ್ಯವು ತೋರುತ್ತದೆ. ಒಂದಾನೊಂದು ದಿವಸ ನಿನ್ನ ಮಗನಿಂದ ಪಠಾಣ ಜಾತಿಯು ತಲೆಯೆತ್ತಿ ಮೆರೆಯುವದು. ಆದರೆ"

'ಆದರೆ' ಏನು?

ನೀನು ಅದನ್ನು ಕೇಳದೆ ಇರುವದೇ ಒಳ್ಳೇದು. ಈ ಲೋಕದಲ್ಲಿ ಸುಖವೊಂದೇ ತುಂಬಿರುವದಿಲ್ಲ. ಬೆಳಕು-ಕತ್ತಲೆಗಳು ಹತ್ತಿಹೊಂದಿ ಇರುವದು ದೇವರ ನೇಮವು. ಬೆಳಕಿನ ಹಿಂದೆ ಕತ್ತಲೆ; ಕತ್ತಲೆಯ ಹಿಂದೆ ಬೆಳಕು. ಮನುಷ್ಯನು ಬೆಳಕನ್ನು ಮಾತ್ರ ಬಯಸುತ್ತಾನೆ. ಅವನಿಗೆ ಕತ್ತಲೆ ಬೇಡ. ಬೇಡವಾದರೆ ಅದು ಬಿಡುವದೋ? ಸಮಯಾನುಸಾರವಾಗಿ ಅದು ತಾನಾಗಿ ಬಂದು ಮುಸುಕುವದು. ಮುಂದೆ ಬರುವದನ್ನು ಇಂದೇ ತಿಳಿದುಕೊಳ್ಳುವದರಿಂದ ಆಗುವದೇನು? ನಾಳಿನ ನೋವನ್ನು ಈವೊತ್ತೇ ತಂದುಕೊಳ್ಳುವದು ಜಾಣತನವಲ್ಲ. ಅದನ್ನು ಕೇಳುವದರಲ್ಲಿ ಹುರಳಿಲ್ಲ. ಕೇಳಬೇಡ. ತೇಜಸ್ವಿಯಾದ ಮಗನನ್ನು ಹಡೆಯುವೆ.

ಹುಸೇನಖಾನನು ಸ್ವಲ್ಪ ವಿಚಾರಕ್ಕೆ ಬಿದ್ದನು. ಕೆಲಹೊತ್ತು ಏನೋ ಆಲೋಚಿಸಿ ಅವನು ಸ್ವಾಮಿ, ಆಗಬೇಕಾದದು ಆಗಿಯೇ ತೀರುವದು. ತಾವು

ಹೇಳದಿದ್ದರೂ ಅದು ಆಗುವದು. ಹೀಗಿರುವಲ್ಲಿ ಕೇಳುವದಕ್ಕೆ ಅಡ್ಡಿ ಏನು? ಅಯ್ಯಾ, ಪರಾಣರು ಮುಂದೆ ಆಗುವದನ್ನು ಕೇಳಿಯೇ ಕೈಕಾಲು ಬಿಡುವಷ್ಟು ಅಳ್ಳೆದೆಯವರಲ್ಲ. ತಾವು ಎಲ್ಲವನ್ನೂ ಹೇಳಬೇಕು. ಕೇಳುವದಕ್ಕೆ ನಾನು ಹಿಂದೆ ಮುಂದೆ ನೋಡುವದಿಲ್ಲ. ಎಂದನು.

" ಹಾಗಿದ್ದರೆ ಕೇಳು - ನಿನ್ನ ಆ ಭಾಗ್ಯವಂತನಾದ ಮಗನ ಹೆಸರು ಹಿಡಿದು ಆತನ ತಾಯಿಯು ಕರೆಯಲಾರಳು. ನೀನೂ ಆ ಮಗನ ಉತ್ಕರ್ಷವನ್ನು ನೋಡಲಾರೆ. "

ಆ ಮಹಾಪುರುಷನಾದ ಫಕೀರನು ಹೊರಟು ಹೋದ ಬಳಿಕ ಹುಸೇನಖಾನನು ಮನಸ್ಸಿನಲ್ಲಿ ಆಲೋಚಿಸುತ್ತಾನೆ– " ತಾಯಿಯು ಮಗನ ಹೆಸರು ಹಿಡಿದು ಕರೆಯಲಾರಳು. " ಇದರ ಅರ್ಥವೇನು? ಅನ್ನಲಿಕ್ಕೆ ಯಾರಿಗೂ ಏನೂ ಕಷ್ಟವಾಗದ ಒಂದು ಹೆಸರನ್ನು ಮಗನಿಗೆ ಇಡುತ್ತೇನೆ. ಬಳಿಕ ತಾಯಿಯು ಮಗನ ಹೆಸರು ಹಿಡಿದು ಹೇಗೆ ಕರೆಯಲಾರಳು? ನಾನು ಮಗನ ಏಳಿಗೆಯನ್ನು ನೋಡಬಾರದೇಕೆ? ಹಾಗಾದರೆ ಕುರುಡನಾಗುವೆನೋ? ಆಗಲಿ, ಚಿಂತೆಯಿಲ್ಲ; ಮಗನ ಹೆಚ್ಚಳವನ್ನು ಕೇಳಿಯೇ ಸಂತೋಷಬಡುವೆನು

ಮಕ್ಕಳಿಲ್ಲದ ಹುಸೇನಖಾನನು ಒಬ್ಬನೇ ಕುಳಿತುಕೊಂಡು ಭಾವೀ ಪುತ್ರನ ವಿಷಯವಾಗಿ ಈ ಪ್ರಕಾರ ಮನಸ್ಸಿನಲ್ಲಿ ಮಂಡಿಗೆ ಮಾಡತೊಡಗಿದ್ದನು. ಜ್ಯೋತಿಷ್ಯದಲ್ಲಿ ಅವನ ವಿಶ್ವಾಸ ಬಹಳ. ಅವರೂ ಭವಿತವ್ಯದ ದಾರಿಯನ್ನು ಅಡ್ಡಗಟ್ಟುವದಕ್ಕೆ ಹಲವು ಬಗೆಯಿಂದ ಹಂಚಿಕೆಹಾಕುತ್ತಿದ್ದನು.

ಫಕೀರನು ಹೇಳಿದ ಭವಿಷ್ಯಕ್ಕೆ ಇದರ ಹೊರತು ಇನ್ನೂ ಬೇರೆ ಅರ್ಥವಿರಬಹುದೆಂಬದು ಅವನಿಗೆ ತೋರಲಿಲ್ಲ. ಹಾಯ್! ಅರಿವು ಇಲ್ಲದ ಮನುಷ್ಯಪ್ರಾಣಿಯು ಇದೇ ಬಗೆಯಾಗಿ ದೈವದ ಉಪಹಾಸಕ್ಕೆ ಗುರಿಯಾಗುವದು. ಫಕೀರನ ಮಾತಿಗೆ ಹುಸೇನಖಾನನು ಮಾಡಿದ ಅರ್ಥದಲ್ಲಿ ಅವನು ಹೆಚ್ಚಾಗಿ ಚಿಂತೆಮಾಡುವಂತೆ ಇರಲಿಲ್ಲ. ಸ್ವಲ್ಪವಿದ್ದರೂ ಭಾಗ್ಯಶಾಲಿಯಾದ ಮಗನು ಹುಟ್ಟುವನೆಂಬ ಉಪನಲ್ಲಿ ಅವನು ಆ ಚಿಂತೆಯನ್ನು ಹಚ್ಚಿಕೊಳ್ಳಲಿಲ್ಲ.

ಕೆಲಹೊತ್ತು ಹೊರಗೆ ಕುಳಿತಿದ್ದು ಹುಸೇನಖಾನನು ನಗೆ ಮೋರೆಯಿಂದ ಮೆಲ್ಲಮೆಲ್ಲನೆ ಅಂತಃಪುರವನ್ನು ಹೊಕ್ಕನು. ಗಂಡನ ಹಿಗ್ಗಿದ ಮೋರೆಯನ್ನು ನೋಡಿ ಪ್ರೀತಿಯ ಹೆಂಡತಿಯಾದ 'ಜೀನ್ನತ ಉನ್ನೇಸಾ'ನು "ಖಾನಸಾಹೇಬರೇ, ಇಷ್ಟೊಂದು ಆನಂದವು ಯಾತರಿಂದ ಉಂಟಾಗಿದೆ. ತಮ್ಮ ಕಣ್ಣುಗಳಲ್ಲಿಯೂ ಮೋರೆಯಲ್ಲಿಯೂ ಹರ್ಷವು ಹೊರಚಲ್ಲುವಂತೆ ಇದೆ. ನನಗೂ ಅದರಲ್ಲಿ ಪಾಲು ಸಿಗುವದಲ್ಲವೆ? " ಎಂದು ಕೇಳಿದಳು.

ಪಾಲು ಕೊಡುವದಕ್ಕೇ ಬಂದಿರುತ್ತೇನೆ. ಇದೇ ಈಗ ಒಬ್ಬ ಮಹಾತ್ಮನು ನನ್ನ ಕೈಯ ನೋಡಿ–“ ನಿನಗೆ ಒಬ್ಬ ಭಾಗ್ಯಶಾಲಿಯಾದ ಮಗನು ಹುಟ್ಟುವನು. ಆ ಮಗನ ಸಾಹಸದಿಂದ ಪಠಾಣ ಜನಾಂಗವು ಬೈಲಿಗೆ ಬರುವದು. ” ಎಂದು ಹೇಳಿದನು. ಜೀನ್ನತ ನೀನು ಜ್ಯೋತಿಷ್ಯವನ್ನು ನಂಬುತ್ತೀಯುಲ್ಲವೇ?

ನಂಬದೆ ಏನು? ಇಂಥ ಒಳ್ಳೆಯ ಫಲವು ಉಂಟಾಗುವಂತೆ ನಾವು ಪುಣ್ಯ ವ ಮಾಡಿರುವೆವಲ್ಲವೆ? ದೇವರು ದಯಮಾಡಲಿ; ಮಹಾತ್ಮನ ಮಾತು ನಿಜವಾಗಲಿ.

ಅದೇ ದಿವಸ ರಾತ್ರಿ ಬೆಳಗಿನ ಜಾವದಲ್ಲಿ ಜೀನ್ನತ ಉನ್ನೀಸಾನಿಗೆ ಪೂರ್ಣ ಚಂದ್ರನು ಮುಗಿಲನಿಂದ ಮೆಲ್ಲ ಮೆಲ್ಲನೆ ಇಳಿದು ಬಂದು ತನ್ನ ಒಡಲಿನಲ್ಲಿ ಸೇರಿ ದಂತೆ ಕನಸು ಬಿತ್ತು. ಕನಸು ಕಂಡು ಅವಳು ಎಚ್ಚತ್ತಳು. ಆ ಅದ್ಭುತವನ್ನು ನೆನೆದು ಬೆರಗುಬಡೆದು ಅಂಜಿ ಬೆವತಳು ಗಂಡನನ್ನು ಎಚ್ಚರಿಸಿ ಕನಸಿನ ಸುದ್ದಿ ಯನ್ನು ಹೇಳಿದಳು.

ಹುಸೇನಖಾನನು ಸಂಭ್ರಮದಿಂದ– ಜೀನ್ನತ, ನಿನ್ನ ಕನಸಿಗೂ, ಆ ಮಹಾ ತ್ಮನ ಮಾತಿಗೂ, ಸರಿಬಿತ್ತು. ಇನ್ನು ಮಲಗಬೇಡ. ನಿದ್ದೆ ಮಾಡಿದರೆ ಕನಸಿನ ಫಲವು ಆಗುವದಿಲ್ಲವಂತೆ ” ಎಂದು ಹೇಳಿದನು.

ಗಂಡಹೆಂಡಿರು ಅತ್ತಲಿತ್ತಲಿನ ಸುದ್ದಿಗಳನ್ನು ಆಡುತ್ತಿರುವಷ್ಟರಲ್ಲಿ ಬೆಳಗಾಯಿತು.

---

೨




ಸಲ್ಮಾನ ಬಾದಶಹರಿಗೂ ಅವರ ಅಮೀರರು ಮೊದಲಾದವರಿಗೂ ಬಹ ಳ ಜನ ಹೆಂಡಂದಿರು ಇರುತ್ತಿದ್ದರು. ಅವರ ಅಂತಃಪುರದಲ್ಲಿ ಪ್ರೀತಿ ಯೂ ಸಮಾಧಾನವೂ ಎಂದಾದರೂ ಒಮ್ಮೆ ತೋರುವವು. ಬಹಳ ಮಾಡಿ ಸವತಿಯರ ಹೊಟ್ಟೆಕಿಚ್ಚಿನಿಂದ ರಾಜ್ಯದ ಸುಖಶಾಂತಿಗಳೂ ಕೂಡ ಲೋಪವಾಗುವವು. ಆದರೂ ಬಾದಶಹರಿಗೂ ಅವರ ಅಮೀರರಿಗೂ ಬಹು ಜನ ಹೆಂಡಿರನ್ನು ಆಳಬೇಕೆಂಬ ಮೋಹವನ್ನು ಬಿಡುವ ಮನಸ್ಸು ಆಗುತ್ತಿರಲಿಲ್ಲ.

ಜಹಾಗೀರದಾರನಾದ ಹುಸೇನಖಾನನಿಗೂ ನಾಲ್ಕೈದು ಜನ ಹೆಂಡಂದಿರು ಇದ್ದರು. ಅವರ ಒಬ್ಬಳ ಹೊಟ್ಟೆಯಲ್ಲಿಯೂ ಮಕ್ಕಳಾಗಿರಲಿಲ್ಲ. ಮಕ್ಕಳಿಲ್ಲದ ಸಂ ಸಾರವು ಅವನಿಗೆ ನೀರಸವಾಗಿಯೂ, ಬೇಸರವಾಗಿಯೂ ತೋರುತ್ತಿತ್ತು.

ಹೀಗಿರುವಲ್ಲಿ ಒಂದಾನೊಂದು ದಿನ ಬೆಳಗುಮುಂಜಾನೆ ಜಹಗೀರದಾರರ ನಗಾರಖಾನೆಯಲ್ಲಿ ಓಲಗದ ಇಂಪಾದ ಸ್ವರವು 'ಸಾಸೇರಾಮು' ದ ಜನರ ಕಿವಿಗಳಿಗೆ ಹಬ್ಬವನ್ನುಂಟು ಮಾಡಿತು. ಅದನ್ನು ಕೇಳಿ ನೆರೆಹೊರೆಯ ಹೆಣ್ಣುಮಕ್ಕಳು ಗುಂಪುಗುಂಪಾಗಿ ಅರಮನೆಗೆ ಹೊರಟರು. ಒಳಹೊಕ್ಕು ನೋಡುತ್ತಾರೆ.– ಅದೇ ಆಗ ಹೆತ್ತ ಕೂಸನ್ನು ತೊಡೆಯ ಮೇಲೆ ಮಲಗಿಸಿಕೊಂಡು ಜೇನ್ನತ ಉನ್ನೇಸಾನು ಒಂದು ಕೋಣೆಯಲ್ಲಿ ಕುಳಿತಿದ್ದಳು. ಕೂಸಿನ ಮುಖದ ಕಾಂತಿಯಿಂದ ಹೆತ್ತ ಕೋಣೆಯಲ್ಲೆಲ್ಲ ಬೆಳಕು ಬಿದ್ದಂತೆ ಇತ್ತು. ಬಾಲಕನನ್ನು ನೋಡುತ್ತಿದ್ದ ಕಣ್ಣನ್ನು ಬೇರೆ ಕಡೆಗೆ ತಿರುಗಿಸಲು ಯಾರಿಗೂ ಆಗಲೊಲ್ಲದು.

ಹುಸೇನಖಾನನು ಫಕೀರರಿಗೂ ತಿರುಕರಿಗೂ ದಾನಧರ್ಮವನ್ನು ಮಾಡಿ ಮಗನನ್ನು ನೋಡುವದಕ್ಕೆ ಅಂತಃಪುರಕ್ಕೆ ಬಂದನು. ಮಗುವನ್ನು ನೋಡಿ ನೋಡಿ ತೃಪ್ತಿ ಇಲ್ಲದೆ ಮತ್ತೂ ಮೇಲಿಂದ ಮೇಲೆ ಅದರ ಸರ್ವಾಂಗವನ್ನು ನಿಟ್ಟಿಸಿ ನೋಡಿದನು. ಬಳಿಕ ಆ ಮಗುವಿನ ಮೋರೆಯ ಕಡೆಗೆ ದೃಷ್ಟಿಯನ್ನಿಟ್ಟು ನಗುತ್ತ ನಗುತ್ತ "ಜೇನ್ನತ, ಈ ದಿವಸ ನಿನ್ನ ಕನಸು ಸಫಲವಾಯಿತು. ಇವನೇ ಆ ಪೂರ್ಣಚಂದ್ರನು" ಎಂದನು.

ಜೇನ್ನತ ಉನ್ನೇಸಾನು ನಾಚಿಕೊಂಡು ಒಮ್ಮೆ ಗಂಡನ ಕಡೆಗೂ ಒಮ್ಮೆ ಕೂಸಿನ ಕಡೆಗೂ ನೋಡಿದಳು ಒಮ್ಮಿಂದೊಮ್ಮೆ ಆಕೆಯ ಕಣ್ಣೀರ ಹನಿಗಳು ಒಂದೆರಡು ಕಣ್ಣಿನಿಂದ ಉರುಳಿ ಕೂಸಿನ ಮೈಮೇಲೆ ಬಿದ್ದವು. ತೊಡೆಯ ಮೇಲಿನ ಕೂಸು ಅಳತೊಡಗಿತು. ಅವಳು ಮನಸ್ಸಿನಲ್ಲಿಯೇ ದೇವರ ಹೆಸರು ತೆಗೆದುಕೊಂಡಳು.

ಹೆಂಡತಿಯು ಮಾತಾಡದಿರುವದನ್ನು ಕಂಡು ಸಿದ್ಧಪುರುಷನು ಹೇಳಿದ ಭವಿಷ್ಯವು ಹುಸೇನಖಾನನ ನೆನಪಿಗೆ ಬಂತು. ಈ ದಿವಸ ಯಾಕೋ ಅವನ ಎದೆಯೊಡೆದು ನೀರಾಯಿತು. ಆ ಎದೆಯೊಡೆಕೆಯನ್ನು ಹೇಗೋ ಮುಚ್ಚಿಕೊಂಡು ಹುಸೇನಖಾನನು– ಜೇನ್ನತ, ಆ ಸಿದ್ಧಪುರುಷನು "ನೀನು ಮಗನ ಹೆಸರು ಹಿಡಿದು ಕರೆಯಲಾರೆ" ಎಂದು ಹೇಳಿದ್ದನು. ಅದಕ್ಕೇ ನಾನು ಮಗುವಿಗೆ ಚಂದ್ರನ ಒಂದು ಚಿಕ್ಕ ಹೆಸರನ್ನು ಇಡಬೇಕೆಂದು ಮಾಡಿದ್ದೇನೆ. ನಾವು ಚಂದ್ರನಿಗೆ 'ಫರಿದ'ನೆಂದು ಕರೆಯುತ್ತೇವಲ್ಲವೆ? ಹೇಗೆ? ನೀನು ಆ ಹೆಸರನ್ನು ಹಿಡಿದು ಕರೆಯಲಾರೆಯಾ? ಎಂದು ಕೇಳಿದನು.

ಜೇನ್ನತಳು ನಸುನಕ್ಕು "ಕರೆಯಬಹುದೆಂದು ತೋರುತ್ತದೆ." ಎಂದಳು. ಮತ್ತೇನೂ ಹೆಚ್ಚಿಗೆ ಮಾತಾಡುವದಕ್ಕೆ ಅವಳಿಗೆ ಆಗಲಿಲ್ಲ. ಏನೋ ಒಂದು

ಪ್ರಕಾರದ ಪೀಡೆಯಿಂದ ಅವಳ ಕುತ್ತಿಗೆ ಉಬ್ಬಿ ಬಂದು ಮಾತು ಹೊರಡದಂತಾಯಿತು.

ಅದೇ ದಿವಸ ರಾತ್ರಿ ಜೇಸ್ನತ ಉನ್ನೀಸಾನಿಗೆ ವಿಷಮಜ್ವರವು ಬಂದಿತ್ತು. ಹುಸೇನಖಾನನು ಬೆಳಗಾಗುತ್ತಲೆ ಜೋನಪುರದಿಂದ ಹೆಸರಾದ ವೈದ್ಯರನ್ನು ಕರೆಸಿ ಔಷಧೋಪಚಾರ ನಡಿಸಿದನು. ಆದರೆ ದೈವದ ಗತಿಯನ್ನು ತಪ್ಪಿಸುವದು ಆಗಲಿಲ್ಲ. ಎರಡು ದಿನಗಳಲ್ಲಿ ಜೇಸ್ನತಳು ಪತಿಯ ತೊಡೆಯ ಮೇಲೆ ತಲೆಯಿಟ್ಟು ಹೊಟ್ಟೆಯ ಕರುಳನ್ನು ಪತಿಯ ಕೈಯಲ್ಲಿ ಕೊಟ್ಟು ಕಣ್ಣು ಮುಚ್ಚಿದಳು. ಮಗನ ಹೆಸರು ಹಿಡಿದು ಕರೆಯುವದು ಅವಳಿಂದ ಆಗಲೇ ಇಲ್ಲ!

ಈ ದಿವಸ ಹುಸೇನಖಾನನಿಗೆ ವೈರಾಗಿಯ ಭವಿಷ್ಯದ ನಿಜವಾದ ಅರ್ಥವು ತಿಳಿಯಿತು. ಅವನ ಎದೆಯೊಡೆದು ನೀರಾಯಿತು. ಶೋಕದಿಂದಲೂ ಮುಂದಿನ ವಿಚಾರದಿಂದಲೂ ಅವನಿಗೆ ಹುಚ್ಚು ಹಿಡಿದಂತಾಯಿತು.

ಆಗ ಹುಸೇನನು, ಈ ಕೂಸೇ ಈ ಅನರ್ಥಕ್ಕೆ ಮೂಲವು; ಇದು ಹುಟ್ಟದೆ ಇದ್ದರೆ ಜೇಸ್ನತಳು ನನ್ನನ್ನು ಬಿಟ್ಟು ಹೋಗುತ್ತಿರಲಿಲ್ಲ. ಎಂದು ಭಾವಿಸಿದನು. ಅಯ್ಯೋ! ಮನುಷ್ಯನು ಇದೇ ಪ್ರಕಾರ ತನ್ನ ಕರ್ಮಫಲಕ್ಕಾಗಿ ಎರಡನೆಯವರ ಮೇಲೆ ತಪ್ಪು ಹೊರಿಸುತ್ತಾನೆ!

ಅವೊತ್ತಿನಿಂದ ಆ ನಿರ್ದೋಷಿಯಾದ ಕೂಸಿನ ಮೇಲೆ ಹುಸೇನಖಾನನ ಮನಸ್ಸಿನಲ್ಲಿ ವಾತ್ಸಲ್ಯಕ್ಕೆ ಬದಲಾಗಿ ಬೇಸರವು ತಲೆದೋರಿತು. ತಾಯಿ ಇಲ್ಲದ ಪರದೇಶಿಯು ದಾಯಿಯ ಮೊಲೆ ಹಾಲಿನಿಂದಲೂ ಪ್ರೀತಿಯಿಂದಲೂ ಹೇಗೋ ಬೆಳೆಯುತ್ತಿತ್ತು.

---

## ೩




ಜೇಸ್ನತ ಉನ್ನೀಸಾನು ತೀರಿಕೊಂಡು ನಾಲ್ಕು ವರ್ಷಗಳು ಆದವು. ಈ ಅವಧಿಯಲ್ಲಿ ಹುಸೇನಖಾನನಿಗೆ ಕೆಲವು ಹೆಣ್ಣು ಗಂಡು ಮಕ್ಕಳು ಹುಟ್ಟಿದ್ದವು. ಈಗ ಅವನ ಮನೆಯಲ್ಲಿ ಬಾಲಕಬಾಲಿಕೆಯರ ಇಂಪಾದ ದನಿಯು ಯಾವಾಗಲೂ ಕೇಳಿಸುವದು. ಹಲವು ತರದ ಉತ್ಸವಗಳಿಂದ ಆನಂದವೇ ಆನಂದವಾಗಿತ್ತು.

ಪರದೇಶಿಯಾದ ಫರೀದನಿಗೆ ಮಾತ್ರ ತಾಯಿ ಇಲ್ಲ. ಅವನ ಉಳಿದ ತಮ್ಮಂದಿರೂ ತಂಗಿಯರೂ ತಮ್ಮ ತಮ್ಮ ತಾಯಿಂದಿರ ಹತ್ತರ ಹೋಗುತ್ತಾರೆ; ಪ್ರೇಮೋ

ಲೆ ಬೀಳುತ್ತಾರೆ; ಹಟ ಮಾಡುತ್ತಾರೆ; ಬೇಕಾದದ್ದನ್ನು ಬೇಡಿ ಇಸಕೊಳ್ಳುತ್ತಾರೆ ಆಗ ಫರೀದನು ಮಾತ್ರ ಮೋರೆಯು ಒಣಗಿಸಿಕೊಂಡು ಓಡಿಹೋಗಿ ತನ್ನ ಪ್ರೇಮದ ದಾದಿಯ ಮೈಮೇಲೆ ಬಿದ್ದು ಕಣ್ತುಂಬ ನೀರು ತಂದು ಹೊರಳಾಡುವನು. ಅವನ ಕಷ್ಟದ ಸುದ್ದಿಯು ಈ ಲೋಕದಲ್ಲಿ ಅವನ ಪ್ರೀತಿಯ ದಾದಿಗಲ್ಲದೆ ಇನ್ನಾರಿಗೂ ತಿಳಿಯದು !

ಹುಸೇನಖಾನನು ಒಮ್ಮೊಮ್ಮೆ ಫರಿದನ ಮೋರೆಯು ನೋಡಿ ನಿಟ್ಟುಸಿರು ಬಿಡುವನು. ಆಗ ಅವನಿಗೆ ಪುತ್ರಲಾಲನ ಸೌಖ್ಯಕ್ಕೆ ಎರವಾದ ತನ್ನ ಜೀವ್ನತಳ ನೆನಪು ಆಗುತ್ತಿತ್ತೆಂದು ತೋರುತ್ತದೆ. ತನ್ನ ಹೊಟ್ಟೆಯ ಕರುಳೆಂದೋ, ತಾಯಿಯಿಲ್ಲದ ಪರದೇಶಿಯೆಂದೋ ಒಮ್ಮೊಮ್ಮೆ ಆತನ ಮನಸ್ಸಿನಲ್ಲಿ ಮಗನ ವಿಷಯವಾಗಿ ವಾತ್ಸಲ್ಯವೂ ಅಂತಃಕರಣವೂ ತುಂಬಿ ತುಳುಕುತ್ತಿದ್ದವು. ಆದರೆ ಆ ಮನಸ್ಸು ಬಹಳ ಹೊತ್ತು ನಿಲ್ಲುತ್ತಿರಲಿಲ್ಲ. ಉಳಿದ ಮಕ್ಕಳು ಬಳಿಗೆ ಬರುವಾಗಲೆ ಹುಸೇನನ ಮನಸ್ಸು ಬೇರೆ ವಿಧವಾಗಿ ಆಗುತ್ತಿತ್ತು. ಸಣ್ಣವನಾದರೂ ಫರಿದನಿಗೆ ಸ್ವಲ್ಪ ತಿಳುವಳಿಕೆ ಹುಟ್ಟಿತ್ತು. ಅದರಿಂದ ಆ ಹುಡುಗರು ತಂದೆಯ ಬಳಿಗೆ ಬರುತ್ತಲೆ ಫರಿದನು ಮೋರೆ ತಿರಿವಿಕೊಂಡು ಮೆಲ್ಲನೆ ಅಲ್ಲಿಂದ ದೂರ ಸರಿದು ಹೋಗುತ್ತಿದ್ದನು.

ಫರಿದನಿಗೆ ಐದು ವರ್ಷಗಳು ತುಂಬಿದವು. ಅವನು ಒಂದು ದಿನ ತಂದೆಯ ಬಳೆಯಲ್ಲಿ ನಿಂ ತು ಕೊಂ ಡು “ ಅಪ್ಪಾ, ಒಂದು ದುಡ್ಡು ಕೊಡೋ ” ಎಂದು ಹಟಮಾಡುತ್ತಿದ್ದನು. ಹುಸೇನಖಾನನು ಹುಡುಗನ ಹಟವನ್ನು ನೋಡಿ ಮನಸು ಕಿಂಕರ ಮಾಡಿದನು. ತಂದೆಯ ಮನಸ್ಸಿನೊಳಗಿನ ಬೇಸರವು ಮೋರೆಯ ಮೇಲೆ ಮೂಡಿತು; ಮಾತಿನಲ್ಲಿ ಒಡೆದು ತೋರಿತು. ಆಗ ಆ ಪರದೇಶಿ ಕೂಸು ಬಹಳ ನೊಂದುಕೊಂಡಿತು. ತಂದೆಯ ಪ್ರೀತಿಯು ತನ್ನ ಮೇಲೆ ಸ್ವಲ್ಪವೂ ಇಲ್ಲವೆಂದು ಆ ಬಾಲಕನು ತಿಳಿದನು. ಆ ಮಗುವಿನ ಕೋಮಲವಾದ ಮನಸ್ಸು ಈ ಕಷ್ಟವನ್ನು ತಾಳಲಿಲ್ಲ. ಆಗ ಅವನು ಅಳತೊಡಗಿದನು

ಇದೇ ಸಮಯಕ್ಕೆ ಸರಿಯಾಗಿ “ ಲಾ ಎಲಾಹ ಇಲ್ಲಲ್ಲಾ ” ಎನ್ನುತ್ತ ಒಬ್ಬ ಫಕೀರನು ಅಲ್ಲಿಗೆ ಬಂದನು. ಅವನು ಅಳುತ್ತಿರುವ ಆ ಬಾಲಕನ ಮೋರೆಯನ್ನು ನಿಟ್ಟಿಸಿ ನೋಡಿ ಬೆರಗಾಗಿ, “ ಅಯ್ಯೋ ದೇವರೇ, ಯಾವನನ್ನು ಒಂದಾನೊಂದು ದಿನ ಹಿಂದುಸ್ಥಾನದ ಬಾದಶಹನನ್ನಾಗಿ ಮಾಡುವೆಯೋ, ಅವನನ್ನು ಈ ದಿನ ಒಂದು ದುಡ್ಡಿಗಾಗಿ ಅಳಿಸುವಿಯಾ? ಇದೇನು ನಿನ್ನ ಚಮತ್ಕಾರವಾದ ಆಟವು! ಎಂದನು. ಫಕೀರನ ಮಾತು ಕೇಳಿ ಹುಡುಗನು ಸುಮ್ಮನಾಗಿ ಆತನ ಕಡೆಗೆ ನೋಡುತ್ತ ನಿಂತನು. ಹುಸೇನಖಾನನು ಫಕೀರನ ಕಡೆಗೆ ಕೋಪಗೊಂಡು ನೋಡಿದನು

ಫಕೀರನು ಭಿಕ್ಷಗಾಗಿ ನಿಲ್ಲಲಿಲ್ಲ. ಕ್ಷಣದೊಳಗೆ ಅಲ್ಲಿಂದ ಎಲ್ಲಿಯೋ ಹೊರಟು ಹೋದನು.

ಸ್ವಲ್ಪ ವೇಳೆ ಏನೋ ಯೋಚಿಸಿ ಹುಸೇನಖಾನನು ಉಸ್‌ಮಾನ್, ಎಂದು ಒಬ್ಬ ಸೇವಕನನ್ನು ಕರೆದನು. ಸೇವಕನು ಎದುರಿಗೆ ಬಂದು 'ಸಲಾಂ' ಮಾಡಿ ನಿಂತನು. ಹುಸೇನನು ಅವನಿಗೆ– "ಒಬ್ಬ ಫಕೀರನು ಇದೇ ಈಗ ಇಲ್ಲಿಂದ ಹೊರಟು ಹೋದನು. ಅವನನ್ನು ಹುಡಿಕಿ ಕರೆದುಕೊಂಡು ಬಾ" ಎಂದು ಹೇಳಿದನು. ಸೇವಕನು ಕರೆತರುವದಕ್ಕೆ ಹೊರಟನು. ಉಸ್ಮಾನನು ನಾಲ್ಕೂ ಕಡೆಗೆ ಹುಡಿಕಿ ತಿರುಗಿ ಬಂದನು. ಮತ್ತೆ 'ಸಲಾಂ' ಮಾಡಿ "ಜನಾಬ, (ಒಡೆಯರೇ) ಫಕೀರನು ಎಲ್ಲಿಯೂ ಕಾಣಲಿಲ್ಲ. ಅವನು ಎತ್ತ ಹೊರಟು ಹೋದನೋ? ಎಲ್ಲರೂ ತನುಗೆ ಗೊತ್ತಿಲ್ಲನೆಂದು ಹೇಳುತ್ತಾರೆ." ಎಂದನು. ಹುಸೇನಖಾನನು ಮತ್ತೆ ವಿಚಾರಮಗ್ನನಾದನು.

ಮುಂದೆ ಎಷ್ಟೋ ದಿವಸಗಳು ಹೊರಟುಹೋಗಿವೆ. ಈ ಅವಧಿಯಲ್ಲಿ ಫರಿದನ ಮೇಲೆ ಹುಸೇನಖಾನನ ಪ್ರೀತಿಯು ಬಹಳವಾಗಿ ಕಡಿಮೆಯಾಗುತ್ತಾ ಬಂತು.

ತಂದೆಯ ಅನಾದರ, ಮಲತಾಯಂದಿರ ಹೊಟ್ಟೆಕಿಚ್ಚು, ಮಲತಮ್ಮಂದಿರ ಮತ್ಸರ ಇವೆಲ್ಲವು ಬಾಲಕನಾದ ಫರಿದನ ಜೀವಕ್ಕೆ ಬೇಸರವನ್ನುಂಟು ಮಾಡಿದವು.

ಇಷ್ಟೊಂದು ಅನಾದರ- ಅಪ್ರೀತಿ- ದ್ವೇಷಗಳು ಸುತ್ತುಗಟ್ಟಿದ್ದರೂ ಅವನಿಗೆ ಒಂದು ಭದ್ರವಾದ ಪ್ರೇಮದ ಮನೆಯಿತ್ತು. ಫರಿದನು ದಾದಿಯ ವಕ್ಷಃಸ್ಥಳದ ಮೇಲೆ ಮಲಗಿ ಎಲ್ಲ ಕಷ್ಟವನ್ನು ಮರೆಯುತ್ತಿದ್ದನು. ಆದರೆ ಕ್ರೂರವಾದ ದೈವವು ಅವನಿಗೆ ಈ ಸುಖವನ್ನು ಬಹಳ ದಿವಸ ಅನುಭವಿಸಗೊಡಲಿಲ್ಲ. ಒಂದು ದಿನ ಫರಿದನ ಕಡೆಗೆ ನೋಡುತ್ತ ಕಣ್ಣೀರಿಡುತ್ತ ಆ ಪ್ರೀತಿಯ ದಾದಿಯು ಪರಲೋಕಕ್ಕೆ ತೆರಳಿದಳು. ತಾಯಿಯಿಲ್ಲದ ಪರದೇಶಿಗೆ ಇನ್ನು ವಿಶ್ರಾಂತಿಯ ಸ್ಥಳವೇ ಉಳಿಯಲಿಲ್ಲ.

ಈಗ ಫರಿದನಿಗೆ ಎಲ್ಲಿ ನೋಡಿದಲ್ಲಿ ಬೇಸರ, ಹೊಟ್ಟೆಕಿಚ್ಚು ಹಗೆತನಗಳೇ ತೋರುತಲಿದ್ದವು. ಬಾಲಕನಿಗೆ ಈ ಅವಸ್ಥೆಯನ್ನು ತಾಳುವದು ಅಸಾಧ್ಯವಾಯಿತು. ಒಂದು ದಿವಸ ತಂದೆಯ ಮನೆಯನ್ನು ಬಿಟ್ಟು ಎಲ್ಲಿಯೋ ಹೊರಟು ಹೋದನು. ಮಮತೆಯಿಲ್ಲದ ತಂದೆಗೆ ಮಗನನ್ನು ಗೊತ್ತು ಹಚ್ಚಿಸುವದು ಅವಶ್ಯವೆಂದು ತೋರಲಿಲ್ಲ!

---

೪



ನಿರ್ಜನವಾದ ಪ್ರದೇಶದೊಳಗಿಂದ ಜೋನಪುರಕ್ಕೆ ದಾರಿ ಹೋಗಿತ್ತು. ಮಧ್ಯಾಹ್ನದ ಬಿಸಿಲಲ್ಲಿ ಒಬ್ಬನೆ ಬಾಲಕನು ಆ ಹಾದಿಯಿಂದ ಹೊರಟಿದ್ದನು. ಆತನ ಮೋರೆಯು ಮೇಲೆ ಮನಸ್ಸಿನ ಕಷ್ಟವನ್ನು ಹೇಗೋ ನುಂಗಿಕೊಳ್ಳುವ ಭಾವವು ತೋರುತ್ತಿತ್ತು. ಹಸಿವೆ ಒಳಲಿಕೆಗಳಿಂದ ಆತನ ಮುದ್ದು ಮೊಗವು ಬಾಡಿ ಬೆಂಡಾಗಿತ್ತು. ಬಾಲಕನು ಎಲ್ಲಿಗೆ ಹೋಗಬೇಕೆಂಬದನ್ನು ಗೊತ್ತುಮಾಡಿರಲಿಲ್ಲ. ಎದುರಿಗೆ ನೋಡುತ್ತ ಸುಮ್ಮನೆ ಸಾಗಿದ್ದನು ಒಮ್ಮಿಂದೊಮ್ಮೆ ಹಿಂದುಗಡೆಯಿಂದ ಯಾರೋ ಪ್ರೀತಿಯ ಸ್ವರದಿಂದ 'ಫರಿದ' ಎಂದು ಕರೆದಂತಾಯಿತು. ಹುಡುಗನು ಹಿಂತಿರುಗಿ ನೋಡಿದನು. ಮೂರ್ತಿಮಂತ ದಯೆಯಂತೆ ಒಬ್ಬ ಫಕೀರನು ಸಮೀಪದಲ್ಲಿ ಬರುತ್ತಿದ್ದನು. ಫರಿದನು 'ಸಲಾಂ' ಮಾಡಿ ತಾವೇ ನನ್ನನ್ನು ಕರೆದಿರೋ? ಯಾಕೆ ಕರೆದಿರಿ? ಎಂದು ಕೇಳಿದನು. ಅದಕ್ಕೆ ಫಕೀರನು ಮಗುವೇ, ನಾನೇ ನಿನ್ನನ್ನು ಕರೆದೆನು. ಈಗ ನೀನು ಎತ್ತ ಹೊರಟಿರುವೆ? ಈ ಅಗ್ಗಾರದ ದಾರಿಯಲ್ಲಿ ದೊಡ್ಡವರೂ ಕೂಡ ಒಬ್ಬರೆ ಹೋಗಲಾರರು. ನೀನು ಸಣ್ಣವನು. ಇಂಥ ಸಾಹಸವನ್ನು ಏಕೆ ಮಾಡುವೆ? ಎಂದು ಕೇಳಿದನು.

ಫಕೀರನ ಮಾತುಗಳಲ್ಲಿ ದಯಾರಸವು ತುಂಬಿ ತುಳುಕುತ್ತಿತ್ತು. ನೋಟದಲ್ಲಿ ವಾತ್ಸಲ್ಯವು ಹೊರಸೂಸುತ್ತಿತ್ತು. ಫರಿದನು ಬಹಳ ದಿವಸಗಳಿಂದ ಈ ತರದ ಪ್ರೀತಿಯ ಮಾತುಗಳನ್ನು ಕೇಳಿರಲಿಲ್ಲ. ಫಕೀರನ ದಯಾಳುತನವನ್ನು ನೋಡಿದೊಡನೆ ಬಾಲಕನ ಮನಸ್ಸಿನೊಳಗಿನ ದುಃಖವು ಹೊರಬಿತ್ತು. ಆಗ ಆವನು ಗಟ್ಟಿಯಾಗಿ ಅತ್ತುಬಿಟ್ಟನು. ಫಕೀರನು— ಮಗುವೇ, ಅಳಬೇಡ. ನೀನೇನೂ ನನಗೆ ಹೇಳಬೇಕಾದದ್ದಿಲ್ಲ. ಎಲ್ಲವನ್ನೂ ಬಲ್ಲೆನು. ದೇವರು ನಿನಗೋಸ್ಕರ ಈ ಹಿಂದುಸ್ಥಾನದ ಕಿರೀಟವನ್ನು ನಿರ್ಮಿಸಹತ್ತಿದ್ದಾನೆ. ಧೈರ್ಯತಾಳು; ನನ್ನೊಡನೆ ಬಾ; ಎಂದನು. ಫರೀದನು ಫಕೀರನ ಸಂಗಡ ಜೋನಪುರಕ್ಕೆ ಹೊರಟನು.

ಜೋನಪುರದ ಒಂದು ಓಣಿಯಲ್ಲಿ 'ಶಾಹೇನಶಾ' ಎಂಬ ಒಬ್ಬ ಸಾಧು ಪುರುಷನಾದ ಫಕೀರನ ಗುಡಿಸಲು ಇತ್ತು. ಶಾಹೇನಶಾನ ತೇಜಸ್ವಿಯಾದ ಆಕಾರವನ್ನು ನೋಡಿ ಆನಂದಬಡುವದಕ್ಕೂ ಆತನ ಬಾಯಿಂದ ಪುಣ್ಯಕಥೆಗಳನ್ನು ಕೇಳಿ ಧನ್ಯರಾಗುವದಕ್ಕೂ ಪ್ರತಿ ದಿವಸ ನೂರಾರು ಜನರು ಆತನ ಗುಡಿಸಲಿಗೆ ಬರುತ್ತಿದ್ದರು. ಜೋನಪುರದ ನವಾಬನಾಗಿದ್ದ ಮಾಸೂದಶಾಲೋಹಾನಿಯು ಶಾಹೇನಶಾನ

ಶಿಷ್ಯನು. ಲೋಹಾನಿ ನವಾಬನು ದಿನಾಲು ಸಂಜೆಯು ಮುಂದೆ ಗುರುವಿನ ದರ್ಶನಕ್ಕಾಗಿ ಆತನ ಗುಡಿಸಲಿಗೆ ಬರುತ್ತಿದ್ದನು.

ಶಾಹೇನಶನು ಎಲ್ಲಿಂದಲೂ ಒಬ್ಬ ತೇಜಸ್ವಿಯಾದ ಚಿಕ್ಕ ಶಿಷ್ಯನನ್ನು ಕರೆತಂದು ಬಹು ದಿವಸಗಳಿಂದ ಜೋಕೆಮಾಡುತ್ತಾನೆಂಬದು ಕ್ರಮವಾಗಿ ಎಲ್ಲರಿಗೂ ಗೊತ್ತಾಯಿತು. ಆಗ ಶಾಹೇನ ಶಿಷ್ಯರೆಲ್ಲ ಒಂದು ದಿವಸ ನೋಡುವದಕ್ಕೆ ಬಂದರು. ಆ ಶಿಷ್ಯನ ನಿಲುವಿಕೆ ಎತ್ತರ. ಹಣೆಯು ಹೊಳಪುಳ್ಳದ್ದು. ಮುಖವು ತೇಜಃಪುಂಜವಾದದ್ದು. ಕಣ್ಣು ತೀಕ್ಷ್ಣವಾದಂಥವು. ಶಾಹೇನಶಾನ ಒಳಿಯಲ್ಲಿ ಕುಳಿತುಕೊಂಡು ಆ ಶಿಷ್ಯನು ಸೇಖಸಾದಿಯ ಕವಿತೆಗಳನ್ನು ಹೇಳಿಸಿಕೊಳ್ಳುತ್ತಿದ್ದನು.

ಫರಿದನ ಕಡೆಗೆ ಪ್ರೇಮದಿಂದ ನೋಡುತ್ತ ಶಾಹೇನಶಾನು ಕೆಳಗೆ ಬರೆದ ಕವಿತೆಯ ಅರ್ಥವನ್ನು ನಿರೂಪಿಸುತ್ತಿದ್ದನು.

**" ಜಬ್ ತಲಕ್ ಹಾಯ ಜಿಂದಗನಿ ಯೋದಲಾಹಿ ಕೀಜಿಯೊ ।**
**ಜಸ್ ಕದರ್ ತೈಫೀಕ ಹೋ ರೋಹಲಿಲ್ಲಾಹ ದೀಜಿಯೋ ॥"**

ಭಗವಂತನನ್ನು ನೆನೆಸುವದು, ಮತ್ತು ತನ್ನ ಸಂಪತ್ತಿಯನ್ನು ಪಾತ್ರದಲ್ಲಿ ದಾನ ಮಾಡುವದು ಇವೆರಡು ಎಲ್ಲ ನೀತಿಗಳ ಸಾರವು. ಫರಿದನೆ, ಬಾಳುವೆಯಲ್ಲಿ ಎಲ್ಲ ಪ್ರಸಂಗಗಳಲ್ಲಿಯೂ ಈ ಮಹಾವಾಕ್ಯವನ್ನು ನೆನಪಿಗೆ ತಂದುಕೊಳ್ಳು. ಮನುಷ್ಯನು ಈ ಎರಡು ಕರ್ತವ್ಯಗಳನ್ನು ಮಾಡುವದಕ್ಕಾಗಿಯೇ ಭೂಮಿಯ ಮೇಲೆ ಬಂದಿರುವನು ಇದಕ್ಕಿಂತ ಹೆಚ್ಚಿನ ಕೆಲಸವು ಇನ್ನಾವದೂ ಇಲ್ಲ.

---

೫



ಮತ್ತೆ ಕೆಲವು ವರ್ಷಗಳು ಸಂದು ಹೋದವು. ಬಾಲಕನಾಗಿದ್ದ ಫರಿದನು ಈಗ ಪ್ರಾಯಕ್ಕೆ ಬಂದನು. ಫರಿದನ ಮೇಲೆ ಶಾಹೇನಶಾನ ಪ್ರೀತಿಗೆ ಪಾರವೇ ಇಲ್ಲ. ಆತನ ಅನುಗ್ರಹದಿಂದ ಫರಿದನು ಕಾವ್ಯ' ಇತಿಹಾಸ, ಅರ್ಥಶಾಸ್ತ್ರ, ರಾಜನೀತಿ, ಯುದ್ಧನೀತಿಗಳಲ್ಲಿ ಪಾಂಡಿತ್ಯವನ್ನು ಹೊಂದಿದನು.

ಎಂದಿನಂತೆ ಒಂದು ದಿನ ಸಂಜೆಯ ಮುಂದೆ ಮಾಮೂದಶಾನು ಶಾಹೇನಶಾನ ದರ್ಶನಕ್ಕಾಗಿ ಬಂದಿದ್ದನು. ಹಿಂದುಸ್ಥಾನದ ಭವಿಷ್ಯತ್ಕಾಲದ ಸ್ಥಿತಿಯ ಸಂಬಂಧವಾಗಿ ಆ ವೃದ್ಧನಾದ ಸಾಧುಪುರುಷನೊಡನೆ ಆತನು ಹಲವು ಮಾತುಗಳನ್ನು ಆಡುತ್ತ ಕುಳಿತಿದನು. ಫರಿದನು ಅಲ್ಲಿಯೇ ಬಳಿಯಲ್ಲಿ ಇದ್ದನು.

ಮಾಮೂದಶಾನು— “ಸ್ವಾಮಿಾ, ದಿಲ್ಲಿಯು ಮೊಗಲರ ಕೈಸೇರಿತು. ಇಬ್ರಾಹಿಮ ಲೋಡಿಯು ಪಾಣಿಪತ್ತದ ಸಂಗ್ರಾಮದಲ್ಲಿ ಮೊಗಲರ ಪ್ರತಾಪಾಗ್ನಿಗೆ ಆಹುತಿಯಾದನು ಗೆಲುವಿನಿಂದ ಸೊಕ್ಕಿಗೇರಿದ ಮೊಗಲರಿಗೆ ಕೇವಲ ದಿಲ್ಲಿಯೊಂದರಿಂದ ತೃಪ್ತಿಯಾದೀತೆಂದು ತೋರುವದಿಲ್ಲ. ಸ್ವಾಮಿಾ, ಪಠಾಣರ ಸ್ಥಿತಿಯು ಮುಂದೆ ಹೇಗಾದೀತೆಂದು ತಮಗೆ ತೋರುತ್ತದೆ?” ಎಂದನು.

ಶಾಹೇನಶಾನು ಸ್ವಲ್ಪ ವೇಳೆ ವಿಚಾರ ಮಾಡಿ— “ಮಗನೇ, ಮೊಗಲರ ಆಶೆಯು ಅಪರಿಮಿತವಾದದ್ದು. ದಿಲ್ಲಿಯನ್ನು ತೆಗೆದುಕೊಂಡು ಅವರು ತೃಪ್ತರಾಗುವದಿಲ್ಲ. ದೇವರ ಸಂಕಲ್ಪವು ಹೇಗೆ ಇರುವದೋ ತಿಳಿಯದು. ಆದರೆ ಎಷ್ಟು ದೂರ ವಿಚಾರ ಮಾಡಿದರೂ ಮೊಗಲರ ಸಾಮ್ರಾಜ್ಯವು ಬಂಗಾಲದ ವರೆಗೂ ಬೆಳೆಯುತಕ್ಕದ್ದೆಂದು ತೋರುವದು. ಆದರೆ ಮೊಗಲರು ವಿಲಾಸ ಪ್ರಿಯರು; ಅವರಿಗೆ ತಾವು ಸಮರ್ಥರೆಂಬ ಗರ್ವ ಬಹಳ; ಸೊಕ್ಕಿಗೇರಿದ ಆ ಮೊಗಲರ ಐಶ್ವರ್ಯವು ಸ್ಥಿರವಾಗಿ ಉಳಿಯಲಾರದು. (ಫರಿದನ ಕಡೆಗೆ ಕೈಮಾಡಿ) ಈ ತರದ ತರುಣರಿಂದ ಪಠಾಣರ ಗೌರವದ ಪುನರುದ್ಧಾರವು ಆಗಬಹುದು.” ಎಂದು ಹೇಳಿದನು.

ಬಳಿಕ ಮುಮುಕ್ಷುವಾದ ಆ ತಪಸ್ವಿಯು ಮತ್ತೆ ಕಣ್ಣು ಮುಚ್ಚಿಕೊಂಡು ಧ್ಯಾನ ಮಾಡತೊಡಗಿದನು. ಲೋಹಾನಿ ನವಾಬನು ಉತ್ಸುಕತೆಯಿಂದ ಆ ಧ್ಯಾನಮಾಡುವ ಯೋಗಿಯ ಮೋರೆಯ ಕಡೆಗೆ ನೋಡುತ್ತ ಕುಳಿತುಕೊಂಡನು. ಸ್ವಲ್ಪ ಹೊತ್ತಿನ ಬಳಿಕ ಶಾಹೇನಶಾನು ಕಣ್ಣು ತೆರೆದನು. ಸ್ನೇಹದ ದೃಷ್ಟಿಯಿಂದ ಮಾಮೂದಶಾನ ಕಡೆಗೆ ನೋಡಿ ಮಗನೇ, ದೂರದೂರ ನೋಡಿದಂತೆ ಪಠಾಣರ ಭಾಗ್ಯಾಕಾಶದ ಮೇಲೂ ಭಯಂಕರವಾದ ಮೋಡಗಳು ತೇಲಾಡುತ್ತಿರುವಂತೆ ಕಾಣುವದು. ಪಠಾಣರು ರಾಜಧರ್ಮವನ್ನು ಪಾಲಿಸುವದಿಲ್ಲ ನುಡಿದಂತೆ ನಡೆಯುವದಿಲ್ಲ.” ಎಂದು ಹೇಳಿದನು.

ಮಾಮೂದಶಾನು ನಿಟ್ಟುಸಿರು ಹಾಕಿದನು. ಕೆಲಹೊತ್ತಿನ ಮೇಲೆ ಲೋಹಾನಿ ನವಾಬನು ಮೋರೆ ತಿರುವಿ ಫರಿದನ ಕಡೆಗೆ ನೋಡಿದನು. ಆ ತರುಣ ತೇಜಸ್ವಿಯಾದ ಮೂರ್ತಿಯ ಮೇಲೆ ಆತನ ಕಣ್ಣುಗಳು ನೆಲೆಗೊಂಡವು. ಅವನ ಮನಸಿನಲ್ಲಿ— ಶಾಹೇನಶಾನು ಈ ತರುಣನ ವಿಷಯವಾಗಿ ಹೇಳಿದ್ದು ನಿಜ; ಈತನು ದೊಡ್ಡ ವಂಶದಲ್ಲಿ ಹುಟ್ಟಿದವನಂತೆ ತೋರುತ್ತಾನೆ. ದೇವರು ಇವನನ್ನು ಮಹಾಕಾರ್ಯಕ್ಕಾಗಿಯೇ ಹುಟ್ಟಿಸಿರುವಂತೆ ತೋರುತ್ತದೆ; ಎಂದು ಭಾವನೆ ಹುಟ್ಟಿತು.

ಮಾಮೂದಶಾನು ಫರಿದನ ಕಡೆಗೆ ನೋಡುತ್ತಿರುವದನ್ನು ಕಂಡು ಶಾಹೇನಶಾನು— ಮಾಮೂದ, ಏನು ನೋಡುತ್ತಿರುವೆ? ಎಂದನು.

ಈ ಹುಡುಗನು ತಮ್ಮ ಅನಂತ ಆಶೀರ್ವಾದಗಳನ್ನು ಹೊಂದಿರುತ್ತಾನೆ. ಅವನ್ನೇ ನೋಡುತ್ತಿದ್ದೆನು; ಎಂದು ಆತನು ಹೇಳಿದನು.

ಶಾಹೇನಶಾನ ಮೋರೆಯ ಮೇಲೆ ಮಂದಹಾಸವು ಕಾಣಿಸಿತು.

ಮಾಮೂದಶಾನು- ಸ್ವಾಮಿ, ತಮ್ಮ ಈ ತರುಣ ಶಿಷ್ಯನನ್ನು ನನ್ನ ಬಳಿಯಲ್ಲಿ ಇಟ್ಟುಕೊಳ್ಳಬಹುದೇ? ನನ್ನ ಹತ್ತರ ಇವನಿಗೆ ಅನಾದರವು ಉಂಟಾಗಲಾರದು; ಎಂದು ಕೇಳಿದನು.

ಶಾಹೇನಶಾನು ಒಪ್ಪಿಗೆಯನ್ನು ತೋರ್ಪಡಿಸಿದನು. ಅಂದಿನಿಂದ ಫರಿದಖಾನನು ಲೋಹಾನಿ-ಮಾಮೂದಶಾನ ಸಂಗಡಿಗನಾದನು.

---

೬



ದು ದಿನ ಜೋನಪುರದ ಸಮೀಪದಲ್ಲಿರುವ ಅಡವಿಯಲ್ಲಿ ಮಾಮೂದಶಾನು ದಂಡಿನೊಡನೆ ಬೇಟೆಯಾಡುತ್ತ ನಡೆದಿದ್ದನು.

ಮುಂದೆ ಹೋಗಿದ್ದ ಒಬ್ಬ ದಂಡಾಳು ಓಡಿ ದಮ್ಮು ಹತ್ತಿ ತೇಗುತ್ತ ಬಂದು- “ ಜಹಾಪನಾ, ಎದುರಿಗಿರುವ ಝೂಡಿನಲ್ಲಿ ಒಂದು ಭಯಂಕರವಾದ ಹುಲಿಯು ಮಲಗಿ ನಿದ್ದೆಮಾಡುತ್ತಿರುವದು. ” ಎಂದು ಅರಿಕೆ ಮಾಡಿಕೊಂಡನು.

ಆಗ ಮಾಮೂದಶಾನು ಕುತೂಹಲದಿಂದ ಮೆಲ್ಲನೆ ಹೆಜ್ಜೆಗಳನ್ನಿಡುತ್ತ ಮುಂದೆ ನಡೆದನು. ದೂರದಿಂದಲೇ ಆ ಹುಲಿಯ ಭಯಂಕರವಾದ ಆಕಾರವು ಕಣ್ಣಿಗೆ ಬೀಳಲು ಆತನಿಗೆ ಮುಂದೆ ಹೋಗುವ ಧೈರ್ಯವಾಗಲಿಲ್ಲ. ಅಂಥ ದೊಡ್ಡ ಹುಲಿಯನ್ನು ಅವನು ಜನ್ಮದಲ್ಲಿ ಎಂದೂ ನೋಡಿರಲಿಲ್ಲ. ಮೆಲ್ಲಮೆಲ್ಲನೆ ಹಿಂದಿರುಗಿ ಬಂದು ತನ್ನ ದಂಡಾಳುಗಳನ್ನು ಕುರಿತು- ಎಲೈ ವೀರರೆ, ನನ್ನ ಸೈನ್ಯದಲ್ಲಿ ಈ ಹುಲಿಯನ್ನು ಒಬ್ಬನೇ ಹೋಗಿ ಎದುರಿಸುವ ಶೂರಪುರುಷನು ಯಾವನಾದರೂ ಇರುತ್ತಾನೆಯೋ? ಎಂದು ಕೇಳಿದನು.

ಆ ಭಯಂಕರವಾದ ಹುಲಿಯು ಝೂಡಿನ ನಡುವೆ ಒಂದು ಮರದ ನೆರಳಿನಲ್ಲಿ ನಿದ್ದೆ ಮಾಡುತ್ತಿತ್ತು. ದೂರದಿಂದ ಅದರ ಕ್ರೂರವಾದ ಆಕಾರವನ್ನು ಕಂಡು ಮಹಾಮಹಾ ವೀರರು ಕೂಡ ಕೈಕಾಲು ಬಿಟ್ಟರು. ಆ ಪ್ರತ್ಯಕ್ಷ ಮೃತ್ಯುವಿನ ಬಾಯಿಗೆ ಬೀಳುವ ಸಾಹಸವನ್ನು ಯಾರು ಮಾಡಬೇಕು? ನವಾಬನ ಪ್ರಶ್ನೆಕ್ಕೆ ಯಾರಿಂದಲೂ ಉತ್ತರವೇ ಇಲ್ಲ. ಮಾಮೂದಶಾನು ಉತ್ತರವು ದೊರೆತೀತೆಂಬ

ಆಶೆಯಿಂದ ಪ್ರಸಿದ್ಧರಾದ ವೀರಪುರುಷರ ಮೋರೆಗಳನ್ನು ಮೇಲಿಂದ ಮೇಲೆ ನೋಡು ತ್ತಿರುವಾಗ ಆ ವೀರ ಸೇನಾಪತಿಗಳು ಒಬ್ಬೊಬ್ಬರೇ ಕೆಳಗೆ ಮೋರೆ ಹಾಕುತ್ತಿದ್ದರು. ಆ ಸಮಯದಲ್ಲಿ ದೂರದಲ್ಲಿ ನಿಂತಿದ್ದ ಒಬ್ಬ ತರುಣನು ನವಾಬನ ಎದುರಿಗೆ ಬಂದು ನಿಂತು ಸಲಾಂ ಮಾಡಿ- “ ಜಹಾಪನಾ, ತಮ್ಮ ಒಪ್ಪಿಗೆ ಇದ್ದರೆ ಈ ದಾಸನು ಈ ಕತ್ತಿಯೊಂದನ್ನು ಮಾತ್ರ ತೆಗೆದುಕೊಂಡು ಆ ಹುಲಿಯ ಎದುರಿಗೆ ಹೋಗಲು ಸಿದ್ಧ ನಿರುತ್ತಾನೆ ” ಎಂದನು.

ಮಾಮೂದಶಾನು ಹಿಗ್ಗಿ ಫರಿದ, ನಿನ್ನ ಸಾಹಸಕ್ಕೆ ಮೆಚ್ಚಿದೆನು. ನೀನು ಪಠಾ ಣರ ಮಾನವನ್ನು ರಕ್ಷಿಸುವೆ, ಎಂದು ನಂಬಿದ್ದೇನೆ; ಎಂದನು.

ಫರಿದನು ಮೆಲ್ಲನೆ ಹೆಜ್ಜೆಗಳನ್ನಿಡುತ್ತ ಹುಲಿಯು ಮಲಗಿದ ಝೂಡಿನಲ್ಲಿ ಸೇರಿ ಅದರ ಎದುರಿನಲ್ಲಿ ಮೊಳಕಾಲೂರಿ ಕುಳಿತುಕೊಂಡು ‘ ಅವ್ ’ ಎಂದು ಗಟ್ಟಿಯಾಗಿ ಕೂಗಿ ಮಲಗಿದ ಹುಲಿಯನ್ನು ಎಚ್ಚರಿಸಿದನು.

ಹುಲಿಯು ಎಚ್ಚತ್ತಿತು. ಒಂದು ಬಾರಿ ಕೆಟ್ಟ ಮೋರೆಮಾಡಿ ಫರಿದನ ಕಡೆಗೆ ನೋಡಿತು. ಈ ಭಯಂಕರವಾದ ದೃಶ್ಯವನ್ನು ಕಂಡು ನವಾಬನ ಸೈನಿಕರು ದೂರ ಸರಿದು ಬಂದರು.

ದೊಡ್ಡ ದೊಡ್ಡ ಸೇನಾಪತಿಗಳು ಆ ಸ್ಥಳದಿಂದ ಒತ್ತಟ್ಟಿಗೆ ಸರಿದು ಬಂದು ನಿಂತು ತಮ್ಮತಮ್ಮೊಳಗೆ- ನಮ್ಮ ಮುಂದಿನ ಹುಡುಗನು; ತಲೆ ಮೇಲಿನ ಮಾಂಸವೂ ಕೂಡ ಹಾರಿಲ್ಲ. ಬೆಂಕಿಯಲ್ಲಿ ಬೀಳುವ ಪತಂಗದಂತೆ ತಾನಾಗಿ ಬೇಡಿ ಬಯಸಿ ಮೃತ್ಯುವಿನ ಬಾಯಿಗೆ ಬಿದ್ದನು; ಎಂದು ಮಾತಾಡಿಕೊಳ್ಳುತ್ತಿದ್ದರು.

ಹುಲಿಯು ಸಿಡಿಲು ಹೊಡೆದಂತೆ ಒಮ್ಮೆ ಗರ್ಜನೆ ಮಾಡಿತು. ಆ ಭಯಂಕ ರವಾದ ಗರ್ಜನೆಯಿಂದ ವನಪ್ರದೇಶವೆಲ್ಲ ಪ್ರತಿಧ್ವನಿಗೊಂಡಿತು. ಆನೆ, ಕುದುರೆ, ಕಾಲಾಳುಗಳು ದಿಕ್ಕುದಿಕ್ಕಿಗೆ ಓಡಿದವು. ಒಬ್ಬರಿಗೊಬ್ಬರು ಎಡವಿ ಮುಕ್ಕರಿಸಿ ಸತ್ತು ಸತ್ತು ಉಳಿದರು.

ಕ್ಷಣದಲ್ಲಿ ಸದ್ದೆಲ್ಲ ಅಡಗಿತು. ಸೊಕ್ಕಿಗೆ ಬಂದ ಫರಿದನನ್ನು ಕೊಂದು ಹುಲಿ ಯು ದಟ್ಟಡವಿಯನ್ನು ಸೇರಿತೆಂದು ಎಲ್ಲರೂ ಭಾವಿಸಿದರು. ಆದರೆ ಮುಂದೆ ಹೋಗಿ ನೋಡುವದಕ್ಕೆ ಯಾರಿಗೂ ಧೈರ್ಯವು ಸಾಲಲಿಲ್ಲ.

ಎಲ್ಲರೂ ಆ ತರುಣ ಫರಿದನ ತಿಳಿಗೇಡಿತನವನ್ನು ಹಲವು ಬಗೆಯಿಂದ ನಿಂದಿ ಸುವದರಲ್ಲಿ ತಮ್ಮ ತಮ್ಮ ಪಾಂಡಿತ್ಯವನ್ನು ತೋರಿಸುತ್ತಿರುವಾಗ ಆತನು ರಕ್ತದಿಂದ ಕೆಂಪಗಾದ ಕತ್ತಿಯನ್ನು ಕೈಯ್ಯಲ್ಲಿ ಹಿಡಿದುಕೊಂಡು ಸಾವಕಾಶವಾಗಿ ಹೆಜ್ಜೆಗಳನ್ನಿ

ಡುತ್ತ ಬಂದು ಮಾಮೂದಶಾನಿಗೆ ಸಲಾಂ ಮಾಡಿ ಆ ಹುಲಿಯ ನಾಲಿಗೆಯನ್ನು ಕಾಣಿಕೆಯಾಗಿ ಕೊಟ್ಟನು

ಆಗ ಆನಂದದಿಂದಲೂ ಆಶ್ಚರ್ಯದಿಂದಲೂ ಮಾಮೂದಶಾನು — ಪಠಾಣ ವೀರನೇ, ನಿನ್ನ ಶೌರ್ಯವು ಶೇರನಿಗೂ (ಹುಲಿಗೂ) ಮಿಗಿರುವದು. ಇಂದಿನಿಂದ ನಿನಗೆ 'ಶೇರಖಾನ' ಎಂದು ಕರೆಯುವೆನು. ಎಂದನು.

ಜಯಲಕ್ಷ್ಮಿಯಿಂದ ಮೆರೆಯುವ ಶೇರಖಾನನು ಅಂದಿನಿಂದ ದೊಡ್ಡ ಸರದಾರನಾಗಿ ಮಾಮೂದಶಾನ ಮಂತ್ರಿಯೂ ಆದನು.

---

೭



ಲೋಕದಲ್ಲಿ ಪರರ ಹೆಚ್ಚಳವನ್ನು ಸಹಿಸುವ ಜನರು ವಿರಳ. ಆ ದಿನ ನೋಡಲೊಂಡು ಶೇರಖಾನನಿಗೆ ಬಹು ಜನ ವೈರಿಗಳುಂಟಾದರು.

ನಿಷ್ಕಾರಣವಾದ ವೈರದಿಂದಲೂ, ಹೊಟ್ಟೆಕಿಚ್ಚು ತುಂಬಿದ ನೀಚ ಜನರ ಮೋಸದ ನಡೆವಳಿಯಿಂದಲೂ ಬೇಸತ್ತು ಶೇರಖಾನನು ಜೋನಪುರವನ್ನು ಬಿಟ್ಟು ಎಲ್ಲಿಯಾದರೂ ಹೋಗಬೇಕೆಂದು ಮಾಡಿ ಈ ಮಾತನ್ನು ಶಾಹೇನಶಾನಿಗೆ ತಿಳಿಸಿದನು.

ಆಗ ಶಾಹೇನಶಾನು ಆತನಿಗೆ ಈ ಪ್ರಕಾರ ಉಪದೇಶ ಮಾಡಿದನು — "ಮಗನೇ, ಜೋನಪುರದ ಹೇಡಿಗಳಾದ ಕುರುಬರು ಹುಲಿಯನ್ನು ನೋಡಿ ಅಂಜಿರುವರು. ಅದಕ್ಕೇ ಈ ವೈರವು. ಇದೀಗ ಮನುಷ್ಯ ಸ್ವಭಾವವು. ಇದಕ್ಕೋಸುಗ ದುಃಖಬಡಬೇಡ ಮಾಮೂದಶಾನ ಅನಂತರ ಜೋನಪುರದಲ್ಲಿ ಲೋಹಾನಿಯವರ ಅರಸೊತ್ತಿಗೆಯು ನಿಲ್ಲುವದಿಲ್ಲ. ಭೂವನಿತೆಯು ವೀರಪುರುಷರಿಗೆ ಮಾಲೆ ಹಾಕುವಳು.

"ಈಗ ನೀನು ದಿಲ್ಲಿಗೆ ಪ್ರಯಾಣ ಮಾಡು; ಅಲ್ಲಿ ಮೊಗಲರ ಅಧಿಕಾರವು ನೆಲೆಗೊಂಡಿರುವದು. ನೀನು ಮೊಗಲರ ದಂಡಿನಲ್ಲಿ ಸೇರಿ ಅವರ ಯುದ್ಧ ಕೌಶಲ್ಯ ಮತ್ತು ದೌರ್ಬಲ್ಯ, ಈ ಎರಡನ್ನೂ ಮನಸ್ಸುಗೊಟ್ಟು ನೋಡಿಕೊಳ್ಳು. ಮಗನೆ, ನಿನಗೆ ಮೊಗಲರ ಸಿಂಹಾಸದ ಮೇಲೆ ಕುಳಿತುಕೊಳ್ಳಬೇಕಾದ ಸುದಿವಸವು ತೀವ್ರವಾಗಿ ಬರುವದು. ಹಿಂದುಸ್ಥಾನದಲ್ಲಿ ಪಠಾಣರ ಗೌರವದ ಪುನರುದ್ಧಾರದ ಕಾರ್ಯವನ್ನು ದೇವರು ನಿನಗೆ ಒಪ್ಪಿಸಿದಾನೆ."

"ಆದರೆ ಮಗನೆ, ಧರ್ಮಮಾರ್ಗವನ್ನು ಬಿಟ್ಟು ನಡೆಯಬೇಡ; ವಿಶ್ವಾಸಘಾತು ಕನಾಗಬೇಡ; ನೀನು ಧರ್ಮವನ್ನು ಕಾಪಾಡಿದತೆ ಧರ್ಮವು ನಿನ್ನನ್ನು ಕಾಪಾಡುವದು."

ಶಾಹೇನಶಾನ ಭವಿಷ್ಯವನ್ನು ಕೇಳಿ ಶೇರಖಾನನ ಮೋರೆಯು ಅರಳಿತು. ಶಾಹೇನಶಾನಿಗೆ ತಲೆವಾಗಿ ನಮಸ್ಕರಿಸಿ ಶೇರನು ದಿಲ್ಲಿಗೆ ಹೊರಟುಹೋದನು.

ಸಿಕ್ರಿಯ ಕಾಳಗದಲ್ಲಿ ಜಯಪಡೆದು ಬಬರನು ಆನಂದಸಾಗರದಲ್ಲಿ ಮುಳುಗಿದ್ದನು. ಈ ಆನಂದದ ಉತ್ಸವವನ್ನು ಮಾಡಿದ ದಿವಸವೇ ಶೇರಖಾನನು ದಿಲ್ಲಿಯ ದರಬಾರಿಗೆ ಬಂದನು.

ಒಬ್ಬ ತುರುಕ ದ್ವಾರಪಾಲಕನು ಅವನನ್ನು ಬಾದಶಹನ ಬಳಿಗೆ ಕರೆದುಕೊಂಡು ಹೋದನು. ಶೇರನು ಕುರ್ನಿಶ್ (ಪ್ರಣಾಮ) ಮಾಡಿ ನಿಂತುಕೊಂಡನು.

ಸಿಂಹಾಸನದ ಮೇಲೆ ಕುಳಿತುಕೊಂಡಿದ್ದ ಮೊಗಲ್ ಚಕ್ರವರ್ತಿಯು ಎದುರಿಗೆ ನಿಂತ ಮನುಷ್ಯನನ್ನು ಕಾಲಿನಿಂದ ತಲೆಯ ವರೆಗೆ ನೋಡಹತ್ತಿದನು. ಶೇರಖಾನನ ಎತ್ತರವಾದ ನಿಲುವಿಕೆಯನ್ನೂ, ವಿಶಾಲವಾದ ಭಾಲಪ್ರದೇಶವನ್ನೂ, ತೇಜಸ್ವಿಯಾದ ಮುಖವನ್ನೂ ನೋಡಿ ಪ್ರಸನ್ನನಾಗಿ– ಪಠಾಣನೆ, ನೀನು ಇಲ್ಲಿ ಬಂದ ಕಾರಣವೇನು? ಎಂದು ಕೇಳಿದನು. ಶೇರಖಾನನು ಮತ್ತೆ ಕುರ್ನಿಶ್ ಮಾಡಿ—" ಜೀಯಾ, ಈ ಸೇವಕನು ಬಾದಶಾಹಿ ಸರಕಾರದ ದಂಡಿನಲ್ಲಿ ಸೇರಬೇಕೆಂದು ಬಂದಿರುತ್ತಾನೆ " ಎಂದು ಬಿನ್ನಯಿಸಿದನು.

ಬಾಬರ– ನೀನು ಆ ಕೆಲಸಕ್ಕೆ ತಕ್ಕವನೆಂಬದರಲ್ಲಿ ಸಂಶಯವಿಲ್ಲ. ಆದರೆ ನಾವು ಮೊಗಲರು. ನೀನು ನಮ್ಮ ದಂಡಿನಲ್ಲಿ ಸೇರಿದರೆ ನಿನಗೆ ಪಠಾಣರೊಡನೆ ಯುದ್ಧಮಾಡಬೇಕಾದ ಪ್ರಸಂಗವು ಬರುವದೆಂಬವನ್ನು ನೀನು ಆಲೋಚಿಸಿರುವಿಯಾ?

ಶೇರಖಾ– ಜೀಯಾ, ತಾವು ದೇವರ ಅಪ್ಪಣೆಯಿಂದ ಹಿಂದುಸ್ಥಾನದ ಚಕ್ರವರ್ತಿಗಳಾಗಿರುವಿರಿ. ಚಕ್ರವರ್ತಿಯ ಕಾರ್ಯದಲ್ಲಿ ಪ್ರಾಣವು ಹೋದರೂ ಲಘುವಾಗಲಾರದೆಂದು ನಂಬಿದ್ದೇನೆ.

ಶೇರಖಾನನ ಮಾತು ಮುಗಿಯುವದರೊಳಗೆ ಬಾದಶಹನ ಬಳಿಯಲ್ಲಿದ್ದ ಒಬ್ಬ ಅಮೀರನು– ಕುರಾಣವನ್ನು ಹಿಡಿದು ಆಣೆ ಮಾಡಿದ ಹೊರತು ಈ ಸಮಯದಲ್ಲಿ ಒಬ್ಬ ಪಠಾಣನಿಗೂ ಒರಿಯ ನಂಬಿಗೆಯ ಮಾತಿನಿಂದ ದಂಡಿನಲ್ಲಿ ಕೆಲಸ ಕೊಡಲಾಗುವದಿಲ್ಲೆಂದು ಹೇಳಿದನು.

ಬಾದಶಹನು ಅಮೀರನ ಮಾತಿಗೆ ಒಪ್ಪಿಕೊಂಡನು. ಕುರಾಣವು ತರಲ್ಪಟ್ಟಿತು. ಶೇರನು ಕುರಾಣವನ್ನು ಕೈಯ್ಯಲ್ಲಿ ಹಿಡಿದು ಆಣೆ ಮಾಡಿ ಮೊಗಲ ಸೈನ್ಯದಲ್ಲಿ ಕುದುರೆ ಸವಾರನಾಗಿ ನಿಯಮಿಸಲ್ಪಟ್ಟನು.

ಅದೇ ದಿವಸ ಸಂಜೆಯ ಮುಂದೆ ಶೇರನು ಕೋಟೆಯೊಳಗೆ ಒಂದು ಏಕಾಂತ ಸ್ಥಳದೊಳಗೆ ಕುಳಿತುಕೊಂಡು ಎಷ್ಟೋ ಆಲೋಚನೆಗಳನ್ನು ಮಾಡತೊಡಗಿದನು. ರಾಜ್ಯಲೋಭವು ಅವನ ಮನಸ್ಸಿನಲ್ಲಿ ಉತ್ಪನ್ನವಾಯಿತು. ಆವರೆ ಆಣೆ ಮಾಡಿ ಮೊಗಲರ ದಾಸ್ಯವನ್ನು ಕೈಕೊಳ್ಳಬೇಕಾಯಿತೆಂಬ ,, ನೆನಪಿಗೆ ಬಂದಕೂಡಲೆ ಅವನ ಆತ್ಮವು ಗ್ಲಾನಿಯನ್ನು ಹೊಂದಿತು. ಮತ್ತು ಅವನು ಮನಸ್ಸಿನಲ್ಲಿ- ಮೊಗಲರು ಏನು ಮೂಢರು? ಕುರಾಣವನ್ನು ಕೈಯಲ್ಲಿ ತೆಗೆದುಕೊಂಡು ಆಣೆ ಮಾಡಿದ ಮಾತ್ರಕ್ಕೆ ಒಬ್ಬ ಅಪರಿಚಿತ ಮನುಷ್ಯನ ಮೇಲೆ ನಂಬಿಗೆಯನ್ನಿಟ್ಟರು. ಇವರಿಗೆ ನಂಬಿಗೆ ಕೊಡುವದಕ್ಕೆ—

ಅಷ್ಟರಲ್ಲಿ ಶಾಹೇನಶಾನು ಉಪದೇಶಿಸಿದ ಮಂತ್ರವು— " ವಿಶ್ವಾಸಘಾತುಕನಾಗಬೇಡ; ನೀನು ಧರ್ಮವನ್ನು ಕಾಪಾಡಿದರೆ ಧರ್ಮವು ನಿನ್ನನ್ನು ಕಾಪಾಡುವದು " ಎಂಬುದು ನೆನಪಿಗೆ ಬಂತು. ಕೆಲಹೊತ್ತು ಅವನ ಆ ವಿಚಾರವು ಅಷ್ಟಕ್ಕೆ ನಿಂತಿತು. ಆ ಮೇಲೆ ಅವನ ಮನಸ್ಸಿನಲ್ಲಿ ಸುಮತಿ ಕುಮತಿಗಳ—ವಿಶ್ವಾಸ ಕಪಟಗಳ— ಬಡಿದಾಟಕ್ಕೆ ಆರಂಭವಾಯಿತು. ಕೊನೆಗೆ ಕಪಟಕ್ಕೇ ಗೆಲುವಾಯಿತು. ಆಗ ಶೇರನು ನಿಶ್ಚಯಿಸಿದ್ದೇನಂದರೆ— ಎಷ್ಟಾದರೂ ಶಾಹೇನಶಾನು ಫಕೀರನು ( ಸನ್ಯಾಸಿ). ಅದು ಫಕೀರರ ಮಾತು. ರಾಜನೀತಿಯಲ್ಲ. ಧರ್ಮಮಾರ್ಗದಲ್ಲಿ ನಡೆದರೆ ಪುಣ್ಯವು ದೊರೆಯಬಹುದು; ರಾಜ್ಯವು ದೊರೆಯಲಾರದು ನನಗೆ ಪುಣ್ಯವು ಬೇಕಾಗಿಲ್ಲ. ರಾಜ್ಯವನ್ನು ಸಂಪಾದಿಸಿ ಸುಖಿಯಾಗುವೆನು

ಸರಳ ಮನಸ್ಸಿನ ಶೇರಖಾನನು ಆದಿನ ಮೊದಲೊಂಡು ರಾಜ್ಯಲೋಭದಿಂದ ಕಪಟದ ಕೈಗೆ ಸಿಲುಕಿದ್ದನು.

ಮೊಗಲರ ಸೈನಿಕನಾಗಿ ಶೇರಖಾನನು ಹಲವು ಯುದ್ಧಗಳನ್ನು ಮಾಡಿದನು. ಒಂದರ ಹಿಂದೊಂದು ದೇಶಗಳು ಮೊಗಲರ ರಾಜ್ಯಕ್ಕೆ ಸೇರಿದವು. ಮೊಗಲರ ರಾಜನೀತಿಯನ್ನೂ ಯುದ್ಧ ಕೌಶಲವನ್ನೂ ಶೇರಖಾನನು ಚನ್ನಾಗಿ ಕಲಿತುಕೊಂಡನು. " ಮೊಗಲರು ಎಷ್ಟು ಪರಾಕ್ರಮಿಗಳೋ ಅಷ್ಟೇ ವಿಲಾಸಪ್ರಿಯರು. ರಣವಾದ್ಯಗಳ ಕಠೋರವಾದ ಧ್ವನಿಯು ಅಡಗಿದ ಕೂಡಲೆ ಅವರ ಪಾಳಯದಲ್ಲಿ ಸತಾರ, ಸಾರಂಗ, ಮೃದಂಗ ಮೊದಲಾದ ವಾದ್ಯಗಳ ಕೋಮಲ ಧ್ವನಿಯು ವ್ಯಾಪಿಸುವದು." ಎಂಬದನ್ನು ಅವನು ಅರಿತುಕೊಂಡನು. ಈ ಪ್ರಕಾರ ವಿಲಾಸಕ್ಕೆ ಮೆಚ್ಚಿದ ಸೋಮಾರಿಗಳಿಂದ ದಿಲ್ಲಿಯ ಸಿಂಹಾಸನವನ್ನು ಸೆಳೆದುಕೊಳ್ಳುವದು ಬಹಳ ಕಠಿಣವಾದ ಕೆಲಸವಲ್ಲವೆಂಬದಾಗಿ ಅವನಿಗೆ ದೃಢವಾದ ನಂಬಿಗೆಯುಂಟಾಯಿತು.

ಮುಂದೆ ಕ್ರಮವಾಗಿ ಮೂರು ನಾಲ್ಕು ವರ್ಷಗಳು ಸಂದವು. ಇಷ್ಟರಲ್ಲಿ ಮಾಮೂದಶಾ ಲೋಹಾನಿಯು ಪರಲೋಕಕ್ಕೆ ತೆರಳಿದನು. ಜೋನಪುರದಲ್ಲಿ ಮೊಗಲರ ವಿಜಯಧ್ವಜವು ನೆಲೆಗೊಂಡಿತು. ಬಂಗಾಲ ಬಿಹಾರಗಳ ಪಠಾಣ ಸುಭೇದಾರರು ದಿಲ್ಲೀಶ್ವರನ ಬಳಿಗೆ ಕಾಣಿಕೆಯನ್ನು ಕಳಿಸಿ ಆತನು ಅಧಿರಾಜನೆಂದು ಒಪ್ಪಿಕೊಂಡರು.

ಶೇರಖಾನನು ದಿಲ್ಲಿಯಿಂದ ಬಿಹಾರಕ್ಕೆ ಕಳುಹಿಸಲ್ಪಟ್ಟನು. ಯಾಕೆಂದರೆ— ಆಗ ಬಿಹಾರದ ನವಾಬನು ಪರಲೋಕವಾಸಿಯಾಗಿದ್ದನು. ಅವನ ಅಲ್ಪವಯದ ಬಾಲಕನು ರಾಜ್ಯಾಧಿಕಾರಿಯು. ಬಾದಶಹನು ಶೇರಖಾನನನ್ನು ಆ ರಾಜಪುತ್ರನ ಕಾರಭಾರಿಯನ್ನಾಗಿ ನಿಯಮಿಸಿದನು. ಆದರೆ ಶೇರಖಾನನಿಗೆ ಈ ಉದ್ಯೋಗವನ್ನು ಬಹಳ ದಿವಸ ಮಾಡಬೇಕೆಂದೆನಿಸಲಿಲ್ಲ. ಸ್ವಲ್ಪ ದಿವಸಗಳಲ್ಲಿ ರಾಜನೀತಿಯ ಕಪಟ ತಂತ್ರದಿಂದ ಬಂಗಾಲ ಬಿಹಾರಗಳ ಸರ್ವಾಧಿಕಾರವನ್ನು ಆಕ್ರಮಿಸಿದನು.

---

೮



ಶೇ ದಿಯು ಮೇಲೆ ತಿರುಗಾಡುತ್ತಿದ್ದ ಸಾವಿರ ಬಾಲಕನು ಈಗ ಬಂಗಾಲ ಬಿಹಾರಗಳ ಸ್ವತಂತ್ರ ಅರಸನಾದ ಶೇರಶಹನೆನಿಸಿಕೊಂಡನು. ಆತನ ಪರಾಕ್ರಮದಿಂದ ಬಂಗಾಲದ ನವಾಬನಾದ ಮಾಮೂದಶಾನು ಗೌಡನಗರವನ್ನು ಬಿಟ್ಟು ಓಡಿಹೋಗಿದ್ದನು. ಬಂಗಾಲದ ರಾಜಧಾನಿಯಾದ ಗೌಡನಗರದಲ್ಲಿ ಶೇರಶಹನ ಸಿಂಹಾಸನವು ಸ್ಥಾಪಿಸಲ್ಪಟ್ಟಿತು.

ದಿಲ್ಲಿಯ ಹುಮಾಯುನ ಬಾದಶಹನು ದೂತರಿಂದ ಈ ವರ್ತಮಾನವನ್ನು ತಿಳಿದು ಶೇರಶಹನನ್ನು ಶಿಕ್ಷಿಸಬೇಕೆಂದು ಹೊರಟನು. ಅಸಂಖ್ಯ ತಾರ್ತರ ಸೈನ್ಯವು ಗಂಗಾಪ್ರವಾಹದಂತೆ ಪೂರ್ವಕ್ಕೆ ಸಾಗಬರಹತ್ತಿತು.

ಎಲ್ಲಕ್ಕೂ ಮುಂದೆ ಕುದುರೆ ಸವಾರರ ಒಂದು ಗುಂಪು. ಅದರ ಹಿಂದೆ ಮಾರ್ಗವನ್ನು ಸರಿಮಾಡುವ ಪಂಪಾಳುಗಳ ಗುಂಪು. ಅದರ ಹಿಂದೆ ತೋಫಿನ ಗಾಡಿಗಳು ಮತ್ತು ತೋಫು ಹಾರಿಸುವ ಸೈನಿಕರು. ಅದರ ಹಿಂದೆ ಪ್ರಚಂಡವಾದ ಕುದುರೆ ಸವಾರರ ದಂಡು. ಅವರ ಹಿಂದೆ ಕಾಲಾಳುಗಳು. ಕಾಲಾಳುಗಳ ಹಿಂದೆ ಬಾದಶಹನ ಶಿಬಿರವೂ ಅಂತಃಪುರವೂ, ಬೊಕ್ಕಸವೂ. ಇವುಗಳ ಹಿಂದೆ ಮತ್ತೆ ಕುದುರೆಯ ಸವಾರರು ಮತ್ತು ಕೆಲವು ತೋಫಿನ ಗಾಡಿಗಳು. ಈ ಪ್ರಕಾರ ವ್ಯವಸ್ಥೆಯಿಂದ ಹೊರಟ ಅಪಾರವಾದ ಆ ಸೇನೆಯ ತುಳಿತಕ್ಕೆ ನೆಲವು ಬಿದರುತ್ತಿತ್ತು.

ಬಿಹಾರವನ್ನು ಪ್ರವೇಶಿಸಿದ ಕೂಡಲೆ ಬಾದಶಹನ ಸೇನಾಪತಿಯಾದ ರುಮಿಖಾನನು ಚುನಾರಗಡವನ್ನು ಮುತ್ತಿದನು. ರುಮಿಖಾನನು ತಾರ್ತರ ಜಾತಿಯವನು. ಮೊಗಲರು ದಂಡೆತ್ತಿ ಬಂದರೆಂಬದನ್ನು ಕೇಳಿದೊಡನೆ ಪಠಾಣರು ಓಡಿ ಹೋಗುವರೆಂದೂ, ಚುನಾರಗಡವು ಯುದ್ಧವಿಲ್ಲದೆ ಅನಾಯಾಸವಾಗಿ ದೊರೆಯುವದೆಂದೂ ಅವನು ಮೊದಲು ತಿಳಿದಿದ್ದನು.

ಆದರೆ ದುರ್ಗಾಧಿಪತಿ (ಕಿಲ್ಲೇದಾರ) ಯಾದ ಗಾಜಿಖಾನನ ಸಾಮರ್ಥ್ಯವನ್ನು ಕಂಡು ಆತನ ಆ ಭ್ರಮವು ದೂರವಾಯಿತು. ಆಗ ರುಮಿಖಾನನು ಲೋಡಿವಂಶದವರಂತೆ ಎಲ್ಲ ಪಠಾಣರು ವೀರ್ಯಹೀನರಾಗಿಲ್ಲವೆಂಬದನ್ನು ಮನಗಂಡನು. ಐದು ತಿಂಗಳು ಮುತ್ತಿಗೆ ಹಾಕಿದ್ದರೂ ಆ ತಾರ್ತರ ಸೇನಾಪತಿಗೆ ಕೋಟೆಯ ಬಾಗಿಲವನ್ನು ತೆರೆಯುವದಕ್ಕೆ ಆಗಲಿಲ್ಲ.

ಹುಮಾಯುನ ಬಾದಶಹನಿಗೆ ಅತಿಶಯವಾದ ಕೋಪವು ಬಂದಿತು. ಆಗ ಅವನು ರುಮಿಖಾನನನ್ನು ತನ್ನ ಬಳಿಗೆ ಕರಿಸಿ—“ ಮೊಗಲರು ಸಾಯುವದಕ್ಕೆ ಹೆದರಿದ್ದನ್ನು ಇದೇ ಮೊದಲು ಕಂಡೆನು. ಚುನಾರಗಡವೊಂದನ್ನು ತೆಗೆದುಕೊಳ್ಳುವದಕ್ಕೆ ಅರ್ಧ ವರ್ಷವು ಹಿಡಿದ ಬಳಿಕ ಗೌಡದೇಶವನ್ನೆಲ್ಲ ವಶಮಾಡಿಕೊಳ್ಳುವದಕ್ಕೆ ಇಡೀ ಆಯುಷ್ಯವೂ ಕೂಡ ಸಾಲದೆಂದು ತೋರುವದು. ” ಎಂದು ಮಾತಾಡಿದನು. ಬಾದಶಹನ ಈ ತಿರಸ್ಕಾರದ ನುಡಿಯು ರುಮಿಖಾನನ ಮರ್ಮಕ್ಕೆ ಹತ್ತಿತು. ನಾಚಿಕೆ, ಸಿಟ್ಟು ಇವುಗಳಿಂದ ಅವನ ಮಸ್ತಕದ ನರಗಳು ಉಬ್ಬಿದವು. ಮುಖವು ಕೆಂಪಗಾಯಿತು.

ಅದೇ ದಿವಸ ರಾತ್ರಿ ಸಾವಿರಾರು ಮೊಗಲರು ಕೋಟೆಯನ್ನು ವಶಮಾಡಿಕೊಳ್ಳುವದಕ್ಕೆ ಸಿದ್ಧರಾದರು. ಕೋಟೆಯ ಗೋಡೆಗೆ ಕಬ್ಬಿಣದ ಮೊಳೆಗಳನ್ನು ಒಡೆದು ಅವುಗಳ ಸಹಾಯದಿಂದ ಮೇಲೆ ಏರಿ ಅವರು ಕೋಟೆಯನ್ನು ಪ್ರವೇಶಿಸಿದರು. ತಾರ್ತರರು ಜೀವದ ಹಂಗುದೊರೆದು ಕಾದುವದಕ್ಕೆ ಪಠಾಣರು ಈಡಾಗಲಿಲ್ಲ. ರುಮಿಖಾನನು ಕೋಟೆಯನ್ನು ಆಕ್ರಮಿಸಿದನು.

ಗೆಲುವಿನಿಂದ ಗರ್ವಿತರಾದ ಮೊಗಲರು ಚುನಾರಗಡದಲ್ಲಿ ಒಂದೆರಡು ದಿವಸ ವಿಲಾಸದಲ್ಲಿ ಕಳೆದು ಮುಂದೆ ಗೌಡನಗರಕ್ಕೆ ಪ್ರಯಾಣ ಬೆಳೆಸಿದರು.

ಶೇರಶಹನಿಗೆ ಈ ಎಲ್ಲ ವರ್ತಮಾನವು ತಿಳಿಯಿತು. ವಿಶ್ವಾಸಿಕರಾದ ಸೇನಾಪತಿಗಳನ್ನೆಲ್ಲ ಕರಿಸಿ ಆಲೋಚನೆಯನ್ನು ಕೇಳಿದನು. ಎಲ್ಲರೂ “ ತಿಲಿಯಾಗಡಿ ” ಎಂಬಲ್ಲಿ ಮೊಗಲರ ಎದುರಿಗೆ ಯುದ್ಧಕ್ಕೆ ನಿಲ್ಲಬೇಕೆಂದು ಆಲೋಚನೆ ಹೇಳಿದರು.

ಶೇರಖಾನನು ಅವರೆಲ್ಲರನ್ನು ಕುರಿತು-“ ನಿಮ್ಮ ಆಲೋಚನೆಯು ಉತ್ತಮ ವಾದದ್ದೇ ಸರಿ. ಆದರೆ ನಿಮ್ಮ ಹೇಳಿಕೆಯಂತೆ ನಡೆದರೆ ಮೊದಲು ನಾವು ಸಾವಿಗೆ ಒಪ್ಪಿಕೊಂಡು ಮೊಗಲರನ್ನು ಸಾವಿಗೆ ಗುರಿಮಾಡಬೇಕಾಗುವದು. ಈಗ ನಾನು ಆ ಪ್ರಕಾರ ಮಾಡಬೇಕೆಂದು ಬಯಸುವದಿಲ್ಲ. ಯುದ್ಧವಿಲ್ಲದೆ ಮೊಗಲರನ್ನು ಗೌಡ ದೇಶದಿಂದ ಓಡಿಸುವ. 'ಮಳೆಗಾಲವು ಆರಂಭವಾದಂತೆಯೇ ಆಗಿದೆ. ಗೌಡದೇಶವ ನ್ನು ಪ್ರವೇಶಿಸಿದೊಡನೆ ಮೊಗಲರು ತಾವಾಗಿಯೇ ಸೆರೆಬಿದ್ದಂತಾಗುವದು. ನಾವು ಝೂರಖಂಡದ ಅಡವಿಯಲ್ಲಿ ತಳವೂರಿ ಅವರು ತಿರುಗಿ ಹೋಗುವ ದಾರಿಯನ್ನು ಕಟ್ಟಿಬಿಡುವ. ಇದರಿಂದ ಮೊಗಲರು ಕೂಳು ನೀರಿಲ್ಲದೆ ಸಾಯುವರು. ” ಎಂದು ತನ್ನ ಆಲೋಚನೆಯನ್ನು ಹೇಳಿದನು.

ಅದೇ ದಿವಸ ಶೇರಶಹನು ಬಹುಶಃ ತನ್ನ ಎಲ್ಲಾ ಸೈನ್ಯವನ್ನೂ ಸಂಪತ್ತಿ ಯನ್ನೂ ತೆಗೆದುಕೊಂಡು ಗೌಡನಗರವನ್ನು ಬಿಟ್ಟು ಹೊರಟನು. ಖವಾಸಖಾನ ನೆಂಬ ಪಠಾಣ ಸೇನಾಪತಿಯು ಎರಡು ಸಾವಿರ ದಂಡನ್ನು ತೆಗೆದುಕೊಂಡು ‘ ತಿಲಿ ಯಾಗಡಿ ’ ಯಲ್ಲಿ ಮೊಗಲರ ಎದುರಿಗೆ ಸುಮ್ಮನೆ ಯುದ್ಧದ ನಟನೆಗಾಗಿ ನಿಂತು ಕೊಂಡನು.

ಬಂಗಾಲದ ಬಾಗಿಲಂತೆ ಇದ್ದ ತಿಲಿಯಾಗಡಿಯಲ್ಲಿ ಮೊಗಲರಿಗೂ ಖವಾಸ ಖಾನನಿಗೂ ಒಂದೆರಡು ದಿವಸ ಸ್ವಲ್ಪ ಯುದ್ಧವಾಯಿತು. ಹೆಚ್ಚಿಗೆ ಯುದ್ಧ ಮಾಡು ವದಕ್ಕೆ ಶೇರಖಾನನ ಅಪ್ಪಣೆಯೇ ಇರಲಿಲ್ಲ. ಒಂದೆರಡು ದಿವಸಗಳಾದ ಬಳಿಕ ಸಮಯ ನೋಡಿಕೊಂಡು ಪಠಾಣ ಸೈನ್ಯವು ಮೊಗಲರಿಗೆ ದಾರಿಯನ್ನು ಬಿಟ್ಟು ಶೇರಖಾನನನ್ನು ಹಿಂಬಾಲಿಸಿ ನಡೆಯಿತು.

ಹುಮಾಯುನನು ಯುದ್ಧವಿಲ್ಲದೆ ಗೌಡದೇಶದ ಅಧಿಕಾರವನ್ನು ಪಡೆದನು. ಅನಾಯಾಸವಾಗಿ ದೊರೆತ ಜಯದಿಂದ ಸೊಕ್ಕಿಗೇರಿದ ಮೊಗಲರು ಪಠಾಣರ ಅಂಜು ಬುರುಕತನವನ್ನು ನೋಡಿ ನಗುತ್ತಿದರು.

ಶೇರಖಾನನಿಗೆ ಮೊದಲಿನಿಂದ ಮೊಗಲರ ಸ್ವಭಾವವು ತಿಳಿದಿತ್ತು. ಮೊಗಲರು ಯು ದ್ಧವಿಲ್ಲದೆ ಗೌಡದೇಶವನ್ನು ಸಂಪಾದಿಸಿದ ಬಳಿಕ ಕೆಲವು ದಿವಸಗಳನ್ನಾದರೂ ವಿಲಾಸ ಉತ್ಸವಗಳಲ್ಲಿ ಕಳೆಯದೆ ಅವರು ಅಲ್ಲಿಂದ ಹೊರಡಲಾರರೆಂದು ಅವನು ಮೊದಲೇ ನಿಶ್ಚಯಿಸಿದ್ದನು. ಆದದ್ದು ಅವರಂತೆಯೇ ಆಯಿತು. ಬಾದಶಹನಿಗೆ ಶೇರಶಹನ ಜಾಣತನವು ತಿಳಿಯಲಿಲ್ಲ.

ಹೂಮಾಯೂನನು ಹೊಸದಾಗಿ ಗೆದ್ದುಕೊಂಡ ರಾಜಧಾನಿಗೆ ಜೇನ್ನತಾಬಾದ ಎಂದು ಹೆಸರಿಟ್ಟು, ಸೇನಾಪತಿ ಸೈನಿಕರೊಡನೆ ವಿಲಾಸದಲ್ಲಿ ದಿನಸಗಳನ್ನು ಕಳೆಯು ಹತ್ತಿದನು.

---

೬



ಝಾರಖಂಡದ ಅಡವಿಯನ್ನು ದಾಟಿ ಶೇರಖಾನನು ದಂಡಿನೊಡನೆ ಶೋಣ ನದಿಗ ಸಮೀಪಕ್ಕೆ ಬಂದನು. ಎದುರಿಗೆ ದುರ್ಜಯವಾದ ರೋಟಾಸ ದುರ್ಗವು. ಶೋಣನದಿಯ ಪ್ರವಾಹಕ್ಕೆ ಹತ್ತಿ ಮೇಲಕ್ಕೆದ್ದಿರುವ ಆದರ ಪ್ರಾಕಾರವು ಮೇಘಮಂಡಲವನ್ನು ಸ್ಪರ್ಶಮಾಡುತ್ತಿತ್ತು. “ಹರಿಕೃಷ್ಣ ವೀರ ಕೇಸರಿ ”ಯು ರೋಟಸಗಡದ ಅಧಿಪತಿಯು.

ರೋಟಸಗಡದಂತೆ ದುರ್ಜಯವಾದ ಕೋಟೆಯು ಬಂಗಾಲ ಬಿಹಾರಗಳಲ್ಲಿ ಒಂದೂ ಇರಲಿಲ್ಲ. ಶೇರಖಾನನು ಕಾಲಿಟ್ಟ ಪ್ರದೇಶದಲ್ಲಿ ಇಂಥ ಒಂದು ಕೋಟೆಯು ಅವನಿಗೆ ಅವಶ್ಯವಾಗಿ ಬೇಕಾಗಿತ್ತು. ಆದರೆ ಎದುರಿಗೆ ನಿಂತು ಯುದ್ಧಮಾಡಿ ಈ ಕೋಟೆಯನ್ನು ವಶಮಾಡಿಕೊಳ್ಳುವದು ಮನುಷ್ಯ ಯತ್ನಕ್ಕೆ ಮೀರಿದ ಮಾತು. ಈ ಕಾರ್ಯವನ್ನು ಸಾಧಿಸುವದಕ್ಕಾಗಿ ಶೇರಖಾನನು ಶಕ್ತಿಯನ್ನು ಬಿಟ್ಟು ಯುಕ್ತಿಯನ್ನು ಆಶ್ರಯಿಸಿದನು.

ಒಬ್ಬ ದೂತನು ಶೇರಶಹನ ಪತ್ರವನ್ನು ತೆಗೆದುಕೊಂಡು ದುರ್ಗದ ಒಡೆಯನಾದ ಹರಿಕೃಷ್ಣನ ಬಳಿಗೆ ಬಂದನು. ಅದರಲ್ಲಿ ಶೇರಶಹನು ಬರೆದದ್ದೇನಂದರೆ:—
“ರಾಜನೆ, ಹುಮಾಯುನ ಬಾದಶಹನಿಗೆ ಅಂಜಿ ನಾನು ಓಡಿ ಹೋಗಬೇಕೆಂದು ಹೊರಟಿದ್ದೇನೆ. ಎಲ್ಲಿಗೆ ಹೋಗಬೇಕು? ಹೇಗೆ ಹೋಗಬೇಕು? ಎಂಬದು ತಿಳಿಯಲೊಲ್ಲದು. ನನ್ನ ಧನ-ಕನಕ ಸಂಪತ್ತಿಯನ್ನೂ ಅಂತಃಪುರದ ಸ್ತ್ರೀಯರನ್ನೂ ನಿನ್ನ ಆಶ್ರಯದಲ್ಲಿ ಇಟ್ಟು, ಹೋಗಬೇಕೆಂದೂ ಮಾಡಿದ್ದೇನೆ. ಸಂಕಟದಲ್ಲಿ ಬಿದ್ದು ಶರಣು ಬಂದವರಿಗೆ ಆಶ್ರಯ ಕೊಡುವಲ್ಲಿ ಕ್ಷತ್ರಿಯ ವೀರರು ಎಂದೂ ಹಿಂದೆ ಮುಂದೆ ನೋಡಲಾರರೆಂದು ನಂಬಿದ್ದೇನೆ.”

ಶೇರಶಹನ ಪತ್ರವನ್ನು ಓದಿದೊಡನೆ ಸರಳ ಮನಸ್ಸಿನ ಹರಿಕೃಷ್ಣನ ಮನಸ್ಸು ಕರಗಿತು. ಶರಣಾಗತರಿಗೆ ಆಶ್ರಯ ಕೊಡುವದಕ್ಕಾಗಿ ಕೋಟೆಯ ಬಾಗಿಲವು ತೆರೆಯಲು ಅಪ್ಪಣೆಯಿತ್ತನು. ಶೇರಶಹನ ಪಾಳಯದಿಂದ ಮೇಣೆಗಳು ಸಾಲುಸಾಲಾಗಿ ಕೋಟೆಯೊಳಗೆ ಬರಹತ್ತಿದವು.

ಮೊದಲಿನ ನಾಲ್ಕಾರು ಮೇಣೆಗಳಲ್ಲಿ ನಿಜವಾಗಿ ಹೆಂಗಸರೇ ಇದ್ದರು. ಬಾಗಿಲದ ಕಾವಲುಗಾರರು ಅವುಗಳನ್ನು ಪರೀಕ್ಷಿಸಿ ನೋಡಿ ಹೆಂಗಸರೇ ಬರುತ್ತಿರುವರೆಂದು ಮನಗಂಡರು. ಮುಂದಿನ ಮೇಣೆಗಳನ್ನು ಪರೀಕ್ಷಿಸುವ ಅವಶ್ಯವಿಲ್ಲೆಂದು ಅವರು ಹಾಗೇ ಬಿಟ್ಟುಕೊಟ್ಟರು. ಏನೂ ಅಡ್ಡಿಯಿಲ್ಲದೆ ಸಾವಿರಾರು ಮೇಣೆಗಳು ಕೋಟೆಯೊಳಗೆ ಬಂದವು.

ಹಿಂದಿನ ಮೇಣೆಗಳಲ್ಲಿ ಬಂದವರು ಅಂತಃಪುರದ ಅಬಲೆಯರಲ್ಲ. ಸಮರ್ಥರಾದ ಪಠಾಣ ವೀರರು. ಸೈನಿಕರೇ ಭೋವಿಗಳಾಗಿದ್ದರು. ಪ್ರತಿಯೊಂದು ಮೇಣೆಯಲ್ಲಿ ಶಸ್ತ್ರಾಸ್ತ್ರಗಳು ತುಂಬಿದ್ದವು.

ಈ ಪ್ರಕಾರ ಮೂರು ಸಾವಿರ ಪಠಾಣವೀರರು ಕೋಟೆಯೊಳಗೆ ಪ್ರವೇಶಿಸಿ ಒಮ್ಮೆಲೆ “ ಅಲ್ಲಾಹೋ ಅಕಬರ ” ಎಂದು ಕೂಗಿದರು. ಹರಿಕೃಷ್ಣನು ಘಾತವಾಯಿತೆಂದು ತನ್ನ ತಪ್ಪಿಗಾಗಿ ಪಶ್ಚಾತ್ತಾಪಬಟ್ಟನು. ಅವನ ಸೈನಿಕರಿಗೆ ಶಸ್ತ್ರಾಸ್ತ್ರಗಳನ್ನು ತೆಗೆದುಕೊಳ್ಳುವದಕ್ಕೂ ಕೂಡ ಅವಕಾಶವಾಗಲಿಲ್ಲ. ಕೆಲವು ಹೊತ್ತಿನಲ್ಲಿ ರಜಪೂತ ವೀರರ ರಕ್ತದಲ್ಲಿ ತೋದುಹೋದ ‘ ರೋಟಸ ’ ಕೋಟೆಯ ಮೇಲೆ ಶೇರಶಹನ ಧ್ವಜಪಟವು ಮೆರೆಯುಹತ್ತಿತು.

ಮರುದಿವಸ ರೋಟಸಗಡದಲ್ಲಿ ತನ್ನ ಧನ-ಪರಿವಾರಗಳನ್ನು ಭದ್ರಪಡಿಸಿ ಶೇರಖಾನನು ಹುಮಾಯುನನು ದಿಲ್ಲಿಗೆ ತಿರುಗಿ ಹೋಗುವ ದಾರಿಯಲ್ಲಿ ಭಯಂಕರವಾದ ಗೋಡೆಯು ಕಟ್ಟಿದಂತೆ ದುರ್ಭೇದ್ಯವಾಗಿ ಸೇನೆಯನ್ನು ನಿಲ್ಲಿಸಿದನು.

ಜೇನ್ನತಾಬಾದದಲ್ಲಿ ಹುಮಾಯುನನು ಈ ಸುದ್ದಿಯನ್ನು ಕೇಳಿದನು. ಆಗ ಆ ವೀರಪುರುಷನ ಹೃದಯವು ಕಂಪಿಸಿತು ಹುಮಾಯುನನು ತಾನು ಬಂಗಾಲದಲ್ಲಿ ವಿಲಾಸದಲ್ಲಿ ಕಾಲ ಕಳೆದದ್ದು ಮೋಸವಾಯಿತೆಂದು ತಿಳಿದನು. ಆಗ ವಿಲಾಸಪ್ರಿಯರಾದ ಮೊಗಲರಿಗೆ ಪಠಾಣರು ಅಂಜುಬುರುಕರಲ್ಲವೆಂಬದು ಅನುಭವಕ್ಕೆ ಬಂತು.

ಆದರೆ ಹುಮಾಯುನನು ಆಗ ತಿರುಗಿ ತನ್ನ ರಾಜ್ಯಕ್ಕೆ ಹೋಗುವದಕ್ಕೆ ಆಲಸ್ಯ ಮಾಡುವಂತೆಯೂ ಇರಲಿಲ್ಲ ಬಂಗಾಲದ ಹವೆಯಿಂದ ಮೊಗಲ ಸೈನ್ಯದಲ್ಲಿ ಬಹುಜನರು ಹಾಸಿಗೆ ಹಿಡಿಯುಹತ್ತಿದರು. ತುರ್ಕಿ ಕುದುರೆಗಳು ಸಾಯುಹತ್ತಿದವು. ಮಳೆಯ ನೀರಿನಿಂದ ದಾರಿಕಟ್ಟಿ ಸಾಗದಂತಾಯಿತು. ಅನಿವಾರ್ಯವಾಗಿ ಹುಮಾಯುನನು ಸತ್ತುಳಿದ ಸೈನ್ಯವನ್ನು ತೆಗೆದುಕೊಂಡು ಹೇಗೊ ದಿಲ್ಲಿಗೆ ಹೊರಟನು. ಇಲ್ಲದಿದ್ದರೆ ಅವನು ದಂಡಿನೊಡನೆ ಬಂಗಾಲದಲ್ಲಿ ಕೊಳೆತುಹೋಗಬೇಕಾಗುತ್ತಿತ್ತು. ಇತ್ತ ಹಿಂಡಾಲನು ಹುಮಾಯುನನ ಮಗನು ದಿಲ್ಲಿಯ ಸಿಂಹಾಸನವನ್ನು ಆಕ್ರಮಿಸಿದ್ದನು

ಎಡಕ್ಕೆ ಆಗಮಹಲಿನ ಗುಡ್ಡಗಳ ಸಾಲು, ಬಲಕ್ಕೆ ಗಂಗಾನದಿಯು. ಈ ಸಮ ವೆಯೇ ಬಂಗಾಲವನ್ನು ಪ್ರವೇಶಿಸುವ ದಾರಿಯಿತ್ತು. ಎದುರಿಗೆ ಶೇರಶಹನ ಅಪಾರನಾ ದ ಸೈನ್ಯವು ಮೃತ್ಯುವು ತನ್ನ ಬಲೆಯನ್ನು ಬೀಸಿರುವದೋ ಎಂಬಂತೆ ಭಯಂಕರವಾ ಗಿ ತೋರುತ್ತಿತ್ತು. ಹುಮಾಯುನನಿಗೆ ಎಡಕ್ಕೆ ಕೆರೆ, ಬಲಕ್ಕೆ ಬಾವಿ ಎಂಬಂತಾ ಯಿತು. ಮುಂದೆ ಹೋದರೆ ಸಾವು, ಹಿಂದೆ ಹೋದರೆ ಸಾವು. ನಿರುಪಾಯನಾಗಿ ಕೆಲವು ದಿವಸ ಅಲ್ಲಿಯೇ ಪಾಳ್ಯವನ್ನು ಹಾಕಿದನು.

ಮೂರು ತಿಂಗಳ ವರೆಗೆ ಮೊಗಲರೂ ಪಠಾಣರೂ ಒಬ್ಬರ ಎದುರಿಗೊಬ್ಬರು ವಾಸಮಾಡಿದ್ದರು. ಆದರೆ ಒಬ್ಬರಮೇಲೊಬ್ಬರು ಏರಿ ಹೋಗುವ ಸಾಹಸವನ್ನು ಮಾಡಿದ್ದಿಲ್ಲ. ಹುಮಾಯುನನಿಗೆ ಅಲ್ಲಿಯೇ ನಿಲ್ಲುವದೂ ಸರಿದೋರಲಿಲ್ಲ. ಎಷ್ಟು ದಿವಸ ನಿಲ್ಲಬೇಕು? ಮತ್ತು ಈ ಸಣ್ಣ ಬಂಗಾಲದ ಸಲುವಾಗಿ ದಿಲ್ಲಿಯು ಕೈಬಿಡುವಂ ತೆ ಇತ್ತು. ಅದ್ದರಿಂದ ಅವನು ದಿಲ್ಲಿಗೆ ಹೋಗುವದಕ್ಕಾಗಿ ಆತುರಪಡಹತ್ತಿದನು.

ಚತುರನಾದ ಶೇರಶಹನಿಗೆ ಬಾದಶಹನ ಈ ಅಭಿಪ್ರಾಯವು ತಿಳಿಯುವದಕ್ಕೆ ತಡವಾಗಲಿಲ್ಲ. ಸಮಯ ನೋಡಿಕೊಂಡು ತಾನೇ ಒಪ್ಪಂದದ ಸಂಧಾನವನ್ನು ಹಚ್ಚಿದನು.

ಹುಮಾಯುನನಿಗೂ ಅದೇ ಬೇಕಾಗಿತ್ತು. ಆದರೆ ಬಾದಶಾಹಿ ಗೌರವವನ್ನು ಒಮ್ಮೆಲೆ ಬಿಡುವದಕ್ಕೆ ಅವನ ಮನಸ್ಸಾಗಲಿಲ್ಲ. ಆಗ ಅವನು ಹೇಳಿಕಳುಹಿದ್ದೇನಂ ದರೆ -- "ಪಠಾಣರನ್ನು ನಂಬುವದಿಲ್ಲ. ಶೇರಶಹನು ಕುರಾಣವನ್ನು ಹಿಡಿದು ಆಣೆ ಮಾಡಿದರೆ ಒಪ್ಪಂದವನ್ನು ಮಾಡಬಹುದು."

ಶೇರಶಹನು ರಾಜ್ಯಲೋಭಕ್ಕೆ ವಶನಾಗಿದ್ದನು. ಕೊನೆಗೆ ಏನೂ ಅಡ್ಡಿಯಿಲ್ಲದೆ ಕುರಾಣವನ್ನು ಕೈಯಲ್ಲಿ ಹಿಡಿದು - "ನಾನು ಬಾದಶಹನ ಹೆಸರಿನ ಶಿಕ್ಕೆ ಮುದ್ರೆಗಳ ನ್ನು ಇಟ್ಟುಕೊಂಡು ಬಂಗಾಲ ಬಿಹಾರಗಳ ಆಡಳಿತವನ್ನು ಸಾಗಿಸುವೆನು." ಎಂದು ಆಣೆ ಮಾಡಿದನು.

ಒಪ್ಪಂದದ ಕಾಗದದ ಮೇಲೆ ಬಾದಶಹನ ಮುದ್ರೆಯು (ಪಂಜಾ) ಮುದ್ರಿತ ವಾಯಿತು. ಶೇರಶಹನು ಅದರ ಮೇಲೆ ತನ್ನ ಸಹಿ ಮಾಡಿದನು.

ಮೂರು ತಿಂಗಳು ಯುದ್ಧವೇಷದಿಂದ ಇದ್ದ ಮೊಗಲ ಸೈನಿಕರೂ ಪಠಾಣ ಸೈನಿಕರೂ ಈ ದಿವಸ ಯುದ್ಧವೇಷವನ್ನು ಕಳೆದು ಸ್ವಲ್ಪ ವಿಶ್ರಾಂತಿಯನ್ನು ಹೊಂ ದಿದರು.

## ೧೦



ಆ ದಿವಸ ಸಂಜೆಯಾದೊಡನೆ ಮೊಗಲರ ಪಾಳೆಯದಲ್ಲಿ ಸಾರಂಗ, ಸತಾರ ಮೊದಲಾದ ವಾದ್ಯಗಳೊಂದಿಗೆ ಕಲಕಂಠಿಯರಾದ ಗಾಯಕಿಯರ ಸಂಗೀತವು ಆರಂಭವಾಯಿತು. ಉಜ್ವಲವಾದ ದೀಪಗಳ ಬೆಳಕಿನಿಂದ ಗುಡಾರಗಳು ಶೋಭಿಸುತ್ತಿದ್ದವು. ' ಸಿರಾಜಿ ' ಯ ಮದ್ಯವನ್ನು ಕುಡಿದು ಪೋಲಾಯಮಾನರಾದ ಸೇನಾಪತಿಗಳು ತಮ್ಮೆದುರಿಗೆ ಹಾಡುತ್ತಿರುವ ವೇಶ್ಯೆಯರಿಗೆ ' ವಾಹವಾ ' ಎಂದು ಉತ್ತೇಜನ ಕೊಡುತ್ತಿದ್ದರು. ನಾನಾ ಪ್ರಕಾರದ ವಿಲಾಸಗಳು, ಉತ್ಸವಗಳು, ಮದ್ಯಪಾನ, ಸಂಗೀತ ಇವುಗಳಲ್ಲಿ ರಾತ್ರಿಯ ಮೊದಲನೆಯ ಯಾಮವು ಕಳೆಯಿತು. ಆ ಬಳಿಕ ಮದ್ಯದ ಮದದಿಂದಲೂ, ವಿಲಾಸದಿಂದಲೂ, ಬಳಲಿದ ಮೊಗಲ ಸೇನಾಪತಿಗಳೂ, ಸೈನಿಕರೂ ಮಲಗಿದರು. ಪಾಳೆಯವೆಲ್ಲ ನಿಃಶಬ್ದವಾಯಿತು. ಉಜ್ವಲವಾದ ದೀಪದ ನಾಲು ಶಾಂತವಾಯಿತು.

ಇತ್ತ ಪಠಾಣರ ಪಾಳೆಯದಲ್ಲಿ ಸಂಜೆಯಾದೊಡನೆ ದೀಪಗಳು ಶಾಂತವಾಗಿದ್ದವು. ಆದರೆ ಮುಖ್ಯ ಮಂತ್ರಿಯಾದ ಖವಾಸಖಾನನ ಅಪ್ಪಣೆಯ ಮೇರೆಗೆ ಯಾರೂ ಮಲಗಿರಲಿಲ್ಲ. ಎಲ್ಲರೂ ಅಪ್ಪಣೆಯನ್ನು ನಿರೀಕ್ಷಿಸುತ್ತಿದ್ದರು.

ರಾತ್ರಿಯ ಎರಡನೆಯ ಪ್ರಹರವು ಮುಗಿಯುತ್ತ ಬಂದಿದೆ. ಅಷ್ಟಮಿಯ ಚಂದ್ರನು ರಾತ್ರಿಯನ್ನೆಲ್ಲ ಅಂಧಃಕಾರದಲ್ಲಿ ಮುಳುಗಿಸಿ ಅಸ್ತಾಚಲಕ್ಕೆ ಹೋಗಿದ್ದನು. ಎಲ್ಲ ಕಡೆ ನಿಶ್ಶಬ್ದವಾಗಿತ್ತು. ಆ ನಿಬಿಡವಾದ ಕತ್ತಲೆಯಲ್ಲಿ ಶೇರಶಹನ ಶಿಬಿರದಲ್ಲಿ ಒಂದು ದೊಡ್ಡ ವಿಷಯದ ಸಲುವಾಗಿ ಆಲೋಚನಾ ಸಭೆಯು ನೆರೆದಿತ್ತು. ಆ ಸಭೆಯಲ್ಲಿ ಈ ಪ್ರಕಾರ ಮಾತುಕಥೆಗಳು ನಡೆದಿದ್ದವು--

ಶೇರಶಹ-- ಮೊಗಲರು ಸಂಕಟದಲ್ಲಿ ಬಿದ್ದದರಿಂದ ಈಗ ಒಪ್ಪಂದವನ್ನು ಮಾಡಿಕೊಂಡಿರುವರು. ನಾವು ದಾರಿಯನ್ನು ಬಿಟ್ಟುಕೊಡದಿದ್ದರೆ ದಿಲ್ಲಿಯು ಅವರ ಕೈಬಿಡುವದು. ಆದ್ದರಿಂದಲೇ ಬಾದಶಹನು ಬಂಗಾಲ ಬಿಹಾರಗಳ ಮೇಲೆ ಈ ಬಂಡುಗಾರನಾದ ಪಠಾಣನ ಒಡೆತನವನ್ನು ಒಪ್ಪಿಕೊಂಡು ಹೊರಟಿರುವನು. ಆದರೆ ದಿಲ್ಲಿಯು ಅವನ ಅಧೀನದಲ್ಲಿ ಬಂದ ಬಳಿಕ ಈ ಒಪ್ಪಂದವನ್ನು ಬಹಳ ದಿವಸ ನಡೆಸುವನೆಂದು ತೋರುವದಿಲ್ಲ.

ಮುಖ್ಯ ಸೇನಾಪತಿಯಾದ ಖವಾಸಖಾನನು--- ಈ ಒಪ್ಪಂದದ ಮೇಲೆ ನಂಬಿಗೆಯಿಟ್ಟು ನಾವು ಒದಗಿಬಂದಿರುವ ಸುಯೋಗವನ್ನು ಕಳೆದುಕೊಳ್ಳಲಾರೆವು. ಬಲಿ

ಯಲ್ಲಿ ಸಿಕ್ಕಿಬಿದ್ದಿರುವ ಸಿಂಹವನ್ನು ಹೊರಗೆ ಬಿಡುವದು ಬುದ್ಧಿವಂತಿಕೆಯ ಲಕ್ಷಣವಲ್ಲ. ಮೊಗಲರು ಪಠಾಣರಿಗೆ ಎಂದೂ ಸ್ವಾತಂತ್ರ್ಯವನ್ನು ಕೊಡುವದಿಲ್ಲ.

ಶೇರಶಹ— ಅದು ನಿಜವು. ಆದರೂ ನಾವು ಒಪ್ಪಂದ ಮಾಡಿಕೊಂಡ ಬಳಿಕ ಅವರಿಗೆ ದಾರಿಯನ್ನು ಬಿಟ್ಟುಕೊಡುವದೇ ಯೋಗ್ಯವಾದದ್ದು. ಇಲ್ಲದಿದ್ದರೆ ಅಧರ್ಮವಾಗುವದು.

ತರುಣ ಸೇನಾಪತಿ ಖಿಜರಖಾನ— ಮೊಗಲರೊಡನೆ ಒಪ್ಪಂದವೆಲ್ಲಿಯದು? ಎಲ್ಲಿಂದಲೋ ಬಂದು ಅವರು ಪಠಾಣರ ಅರಸೊತ್ತಿಗೆಯನ್ನು ಕಿತ್ತುಕೊಂಡಿರುತ್ತಾರೆ. ಆ ನೀಚರೊಡನೆ ಒಪ್ಪಂದದಂತೆ ನಡೆಯುವದೇ ಅಧರ್ಮವಾಗುವದು. ಮೊಗಲರು ಅಪಹರಿಸಿದ ನಮ್ಮ ಅರಸೊತ್ತಿಗೆಯನ್ನು ಮತ್ತೆ ಸಂಪಾದಿಸುವ. ಇದರಿಂದ ಒಪ್ಪಂದಕ್ಕೆ ಭಂಗ ಬಂದರೂ ಬರಲಿ, ಅದರಿಂದ ನರಕಕ್ಕೆ ಹೋಗಬೇಕಾದೀತೆಂದು ನನಗೆ ತೋರುವದಿಲ್ಲ.

ಅಯ್ಯೋ! ಮನುಷ್ಯನು ಪಾಪವನ್ನು ಮಾಡುವಾಗ ಇದೇ ರೀತಿಯಾಗಿ ಮನಸ್ಸಿಗೆ ಪ್ರೇರಣೆ ಮಾಡುತ್ತಾನೆ! ಇದೇ ರೀತಿಯಾಗಿ ತನ್ನ ವಿಚಾರವು ಧರ್ಮಮಾರ್ಗವನ್ನು ಬಿಟ್ಟದ್ದಲ್ಲವೆಂದು ಸಮಾಧಾನ ಹಚ್ಚಿಕೊಳ್ಳುತ್ತಾನೆ!

ವೃದ್ಧ ಸೇನಾಪತಿಯಾದ ಶಾಹಾವಾಜಖಾನನು ದಿನಕ್ಕೈದುಬಾರಿ ನಮಾಜು ಮಾಡುತ್ತಿದ್ದನು. ಧಾರ್ಮಿಕನೆಂದು ಸೈನ್ಯದಲ್ಲೆಲ್ಲ ಅವನ ಪ್ರಸಿದ್ಧಿಯಿತ್ತು. ಆತನು ಹೇಳುತ್ತಾನೆ:— "ಜೀಯಾ, ಆಡಿದ ಮಾತಿಗೆ ತಪ್ಪುವದರಿಂದ ಉಂಟಾಗಬಹುದಾದ ಪಾಪಕ್ಕೆ ನಾವೆಲ್ಲರೂ ಕೂಡಿ ಮುಂದೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವ. ಆದರೆ ಈ ದಿವಸ ಒದಗಿದ ಸುಯೋಗವನ್ನು ಕಳೆದುಕೊಳ್ಳಲಾರೆವು. ಈ ಕತ್ತಲೆಯಲ್ಲಿ ಮೊಗಲರನ್ನು ನಿರ್ಮೂಲವಾಗಿ ತರಿದು ಹಾಕಲೇ ಬೇಕು."

ಮೊಗಲರ ಮೇಲೆ ಪಠಾಣರು ಬೆಂಕಿಯ ಕಾರಹತ್ತಿರುತ್ತಾರೆ. ಒಳ್ಳೆಯ ಸಮಯವು ಒದಗಿದ್ದು ನಿಜವು. ಮೊಗಲರ ಮೇಲೆ ಬೀಳುವದಕ್ಕೆ ಎಲ್ಲರೂ ಒಮ್ಮನಸ್ಸಿನಿಂದ ಎದ್ದಿರುತ್ತಾರೆ. ಇಂಥ ಪ್ರಸಂಗದಲ್ಲಿ ಶೇರಶಹನು ಏನು ಮಾಡಬೇಕು? ತಂದೆ ಹಸನರ ಆಸೆಯನ್ನು ನೆನೆದು ಆತನು ಏನೂ ಮಾತಾಡಲಿಲ್ಲ.

ಪಠಾಣ ಸೇನಾಪತಿಗಳು ಮೇಲಿಂದ ಮೇಲೆ ಉತ್ತೇಜನ ಕೊಡಹತ್ತಿದರು. ಆ ಉತ್ತೇಜನದಿಂದ ಶೇರಶಹನ ಮನಸಿನಲ್ಲಿ ರಾಜ್ಯಲೋಭದ ಮೋಹವು ಉತ್ಪನ್ನವಾಯಿತು. ಪಠಾಣರು ಒಪ್ಪಂದವನ್ನು ಮುರಿದು ಮೊಗಲರ ಮೇಲೆ ಬೀಳುವ ಎತ್ತುಗಡೆ ಮಾಡಿದರು. ಶೇರಶಹನು ನಿರ್ವಾಹವಿಲ್ಲದೆ ಸುಮ್ಮನಿದ್ದನು. ಪಠಾಣರು ಧರ್ಮವನ್ನು ಕಾಪಾಡಿಕೊಳ್ಳಲಿಲ್ಲ.

---

## ೧೧



ಮಧ್ಯ ರಾತ್ರಿಯ ಸಮಯವು. ಮೊಗಲರೆಲ್ಲ ನಿದ್ರಾಸುಖದಲ್ಲಿ ಇದ್ದರು. ಎಷ್ಟೋ ಜನರಿಗೆ ದಿಲ್ಲಿಗೆ ತಿರುಗಿ ಬಂದ ಹಾಗೂ ಬಳಗದವರೊಡನೆ ಆನಂದದಿಂದ ಇದ್ದ ಹಾಗೂ ಕನಸು ಬಿದ್ದಿದೆ. ಇಂಥ ಸಮಯದಲ್ಲಿ ಒಮ್ಮಿಂದೊಮ್ಮೆ ಪಠಾಣರ ತೋಫುಗಳು ಸಿಡಿಲಿನಂತೆ ಗರ್ಜಿಸುತ್ತ ಬೆಂಕೆಯನ್ನು ಸುರಿಸಹತ್ತಿದವು. ಎಷ್ಟೋ ಮೊಗಲ ಸೈನಿಕರ ನಿದ್ರೆಯು ದೀರ್ಘನಿದ್ರೆಯಾಯಿತು.

ಒಮ್ಮಿಂದೊಮ್ಮೆ ನಿದ್ದೆ ಬಿಟ್ಟು ಎಚ್ಚತ್ತು ಮೊಗಲರಿಗೆ ಆಯುಧಗಳನ್ನು ತೆಗೆದುಕೊಳ್ಳುವ ಅವಕಾಶವಾಗಲಿಲ್ಲ. ಪಠಾಣಸವಾರರ ರಣಯಜ್ಞದಲ್ಲಿ ಹಲವು ಮೊಗಲ ಪಶುಗಳು ಹತವಾದವು. ಅವರ ಖಡ್ಗಧಾರಾ ತೀರ್ಥದಲ್ಲಿ ಅಸಂಖ್ಯ ಮೊಗಲ ವೀರರು ಪ್ರಾಣಬಿಟ್ಟು ವೀರಸ್ವರ್ಗವನ್ನೈದಿದರು. ಹಲವರು ಗಂಗೆಯಲ್ಲಿ ಧುಮುಕಿದರು. ಸೇನಾಪತಿಗಳು ಎಷ್ಟು ಶ್ರಮಬಟ್ಟರೂ ಅಸ್ತವ್ಯಸ್ತರಾದ ದಂಡಾಳುಗಳನ್ನು ಸಾಲುಗೊಳಿಸಿ ನಿಲ್ಲಿಸುವದು ಸಾಧ್ಯವಾಗಲಿಲ್ಲ.

ಕೆಲವು ಜನ ನಂಬಿಗೆಯ ಸೇವಕರೊಡನೆ ಹುಮಾಯೂನ ಬಾದಶಹನು ಕುದುರೆಯನ್ನೇರಿ ಪಾಳ್ಯೆಯದಿಂದ ಹೊರಬಿದ್ದು ಕೊನೆಯ ಪ್ರಯತ್ನ ಮಾಡಿನೋಡಿದನು. ಕೊನೆಗೆ ತಾನೇ ಕುದುರೆಯೊಡನೆ ಗಂಗೆಯಲ್ಲಿ ಧುಮುಕಿದನು. ಪ್ರವಾಹದ ಸೆಳವಿಗೆ ಬಿದ್ದು ಎತ್ತೋ ನಡೆದನು. ಬಾದಶಹನ ಕುದುರೆಯು ಮುಳುಗಿ ಸತ್ತುಹೋಯಿತು.

ಹುಮಾಯೂನನು ಮುಳುಗಿ ಮುಳುಗಿ ಏಳುತ್ತಿದ್ದನು. ಗಂಗೆಯ ಪ್ರವಾಹವು ಅವನನ್ನು ಎಳೆದುಕೊಂಡು ನಡೆಯಿತು. ದೊಡ್ಡ ದೊಡ್ಡ ತೆರೆಗಳು ಸಿಟ್ಟಿಗೆದ್ದ ಹಾವಿನ ಹೆಡೆಯಂತೆ ಭಯಂಕರವಾಗಿ ಅವನ ತಲೆಯ ಮೇಲೆ ಅಪ್ಪಳಿಸುತ್ತಿದ್ದವು. ಸುತ್ತಲು ಕತ್ತಲೆ ಮುಸುಕಿಗೊಂಡಿದೆ. ಬಾದಶಹನು ಜೀವದ ಆಶೆಯನ್ನು ತೊರೆದು ದೇವರ ಹೆಸರನ್ನು ತೆಗೆದುಕೊಳ್ಳಹತ್ತಿದನು.

ಆಯುಷ್ಯವು ತುಂಬದೆ ಸಾವು ಬಾರದಲ್ಲವೆ? ಮೃತ್ಯುವಿನ ದವಡೆಯಲ್ಲಿ ಸಿಕ್ಕಿದ್ದರೂ ಹುಮಾಯೂನನಿಗೆ ಮರಣವು ಒದಗಲಿಲ್ಲ. ಹುಮಾಯೂನನು ನದಿಯ ಸೆಳವಿಗೆ ಬಿದ್ದು ಹೋಗುತ್ತಿರುವಾಗ ಒಮ್ಮಿಂದೊಮ್ಮೆ ಒಂದು ಬಿರುಸು ಪದಾರ್ಥವು

ಅವನ ಕೈಗೆ ಹತ್ತಿತು. ಅದರ ಸ್ಪರ್ಶದ ಮೇಲಿಂದ ಮನುಷ್ಯನಿರಬಹುದೆಂದು ಅವನು ತಿಳಿದನು. ಆಗ ಬಾದಶಹನು ಕುಗ್ಗಿದ ದನಿಯಿಂದ ನೀನು ಯಾರು, ನಾವಿನ ಬಾಯಿಗೆ ಬಿದ್ದ ಕಾಲದಲ್ಲಿ ಈ ದೈನಗೇಡಿಯಾದ ಹುಮಾಯುನನನ್ನು ಕಾಪಾಡುವ ಮಿತ್ರನೂ ಇರುತ್ತಾನೆಯೋ? ಎಂದು ಕೇಳಿದನು.

ಆ ಪ್ರವಾಹದಲ್ಲಿ ಹೋಗುತ್ತಿದ್ದ ಮನುಷ್ಯನು ಆದರದಿಂದ " ಬಾದಶಹನಿಗೆ ಜಯವಾಗಲಿ. ನಾನು ತಮ್ಮ ಪಾದಸೇವಕನು, ಭಿಸ್ತಿಯವನು. ಒಡೆಯರೇ ಇದನ್ನು ಆಶ್ರಯಿಸಿರಿ. ದೇವರ ದಯದಿಂದ ತಮ್ಮನ್ನು ದಂಡೆಗೆ ಮುಟ್ಟಿಸಲು ಸೇವಕನು ಸಮರ್ಥನಿರುತ್ತಾನೆ. " ಎಂದು ಬಿನ್ನಯಿಸಿದನು. ಕಂಗೆಟ್ಟು ಹೋದ ಬಾದಶಹನು, ಭಿಸ್ತಿಯು ಕೊಟ್ಟ ಸಂಗಡಿಕಾಗಿಯನ್ನು ಹಿಡಿದುಕೊಂಡು ನಿಂತನು. ಭಿಸ್ತಿಯು ಮೆಲ್ಲಮೆಲ್ಲನೆ ಮುಂದೆ ನಡೆಯುತ್ತ ದಂಡೆಗೆ ಮುಟ್ಟಿಸಿದನು.

ದಂಡೆಗೆ ಹತ್ತಿದ ಕೂಡಲೆ ಬಾದಶಹನು ಆನಂದದಿಂದ ಆ ಭಿಸ್ತಿಯನ್ನು ಅಪ್ಪಿಕೊಂಡು " ನೀನು ನನಗೆ ಜೀವದಾನ ಮಾಡಿದವನು. ಇದರ ಅಭಿನಂದನಕ್ಕಾಗಿ ನಿನಗೆ ಒಂದು ದಿವಸದ ಮಟ್ಟಿಗೆ ಬಾದಶಹ ಪದವನ್ನು ಕೊಡುವೆನು " ಎಂದು ಹೇಳಿದನು.

ಅಷ್ಟು ಹೊತ್ತಿಗೆ ಬೆಳಗಾಗುತ್ತ ಬಂದಿತ್ತು. ರಾತ್ರಿಯ ಕತ್ತಲೆಯು ಹರಿಯಿತು. ನದಿಯನ್ನು ದಾಟಿ ಈಚೆಗೆ ಬಂದವರು ಬಾದಶಹನನ್ನು ಕಂಡು ಅವನ ಬಳಿಗೆ ಬಂದರು.

ಸತ್ತು ಉಳಿದ ಸೇನೆಯೊಡನೆ ಬಾದಶಹನು ದಿಲ್ಲಿಗೆ ಹೊರಟನು. ಬೊಕ್ಕಸವೂ ರಾಣಿವಾಸವೂ ವೈರಿಗಳ ಕೈಗೆ ಬಿದ್ದವು. ಬಾದಶಹನು ತನ್ನ ಪಟ್ಟದರಸಿಯ ನೆನವಾದ ಕೂಡಲೆ ನಿಟ್ಟುಸಿರು ಹಾಕಿದನು. ಆದರೆ ಅವಳನ್ನು ಬಿಡಿಸಿಕೊಳ್ಳುವ ಉಪಾಯವನ್ನು ಮಾಡುವದು ಅವನಿಂದ ಆಗಲಿಲ್ಲ

ಬೆಳಗಾಗುವದಕ್ಕೆ ಮುಂಚೆಯೇ ಒಬ್ಬ ಪಠಾಣ ಸೈನಿಕನು ಶೇರಶಹನ ಬಳಿಗೆ ಬಂದು ' ಸಲಾಂ ' ಮಾಡಿ— ಜೀಯಾ, ಹತ್ತು ಸಾವಿರಕ್ಕಿಂತ ಹೆಚ್ಚಿಗೆ ಮೊಗಲರು ರಣಭೂಮಿಯಲ್ಲಿ ಪ್ರಾಣಬಿಟ್ಟಿರುವರು. ಹತ್ತು ಸಾವಿರ ಜನರು ಗಂಗೆಯಲ್ಲಿ ಮುಳುಗಿ ಹೋಗಿರಬಹುದು. ಬಾದಶಹನು ಓಡಿಹೋಗಿರುವನು. ಅವನೂ ಗಂಗೆಯಲ್ಲಿ ಮುಳುಗಿರುವನೋ ತಿಳಿಯದು. ಬಾದಶಹನ ಬೊಕ್ಕಸವೂ, ರಾಣಿವಾಸವೂ ನಮಗೆ ಸೇರಿರುವವು. ಬಾದಶಹನ ಪಟ್ಟದರಸಿಯೂ ಸೆರೆಸಿಕ್ಕಿರುವಳು, ಎಂದು ಹೇಳಿದನು.

ಇದನ್ನು ಕೇಳಿ ಶೇರಶಹನು ಆ ಸೈನಿಕನಿಗೆ— " ಬಾದಶಹನ ರಾಣಿಯನ್ನು ಮರ್ಯಾದೆಯೊಡನೆ ನಮ್ಮ ಬಳಿಗೆ ಕರೆದುಕೊಂಡು ಬಾ " ಎಂದು ಅಪ್ಪಣೆಕೊಟ್ಟನು.

ಪಠಾಣರು ತಮ್ಮನ್ನು ಮೋಸಗೊಳಿಸಿದರೆಂದು ಬಾದಶಹನ ಪಟ್ಟದರಸಿಯಾದ ಆಯೇಶಾಬಾನುವು ಅವರ ಮೇಲೆ ಬಹಳ ಕೋಪಗೊಂಡಿದ್ದಳು. ಮೇಲಾಗಿ ಮತ್ತೆ ಶೇರಶಹನ ಪಾಳಯಕ್ಕೆ ಹೋಗುವ ಹೊತ್ತು ಬಂದದ್ದನ್ನು ನೋಡಿ ಬಹಳ ಅಂಜಿದಳು. ಶೇರಖಾನನ ಬಳಿಗೆ ಬರುವ ಮುಂದೆ ಪ್ರಾಣಕ್ಕಿಂತ ಹೆಚ್ಚಾದ ಮರ್ಯಾದೆಯ ವಿಚಾರವು ಮನಸ್ಸಿನಲ್ಲಿ ಬರಲು ಅವಳು ತನ್ನ ಬೆರಳಲ್ಲಿಟ್ಟುಕೊಂಡ ವಜ್ರದ ಉಂಗುರವನ್ನು ಹಲವು ಬಾರಿ ನೋಡಿದಳು. ವಜ್ರವು ಭಯಂಕರ ವಿಷವುಳ್ಳದ್ದು. ಮಾನಕ್ಕೆ ಹಾನಿ ಬಂದರೆ ಅದನ್ನು ಆ ಕ್ಷಣವೆ ಅರೆದು ಕುಡಿಯಬೇಕೆಂದು ಆಲೋಚನೆ ಮಾಡಿದ್ದಳು.

ಆದರೆ ಮಹಾರಾಣಿಯು ತನ್ನ ಪಾಳಯಕ್ಕೆ ಬಂದೊಡನೆ ಶೇರಶಹನು ವಿನಯದಿಂದ ನಮಸ್ಕಾರ ಮಾಡಿ “ ಬೇಗಮ್‌ಸಾಹೇಬ, ನನ್ನನ್ನು ತಮ್ಮ ಮಗನೆಂದು ಭಾವಿಸಿರಿ. ಪಠಾಣರ ಪಾಳಯದಲ್ಲಿ ತಮ್ಮ ಮಾನಕ್ಕೆ ಏನೂ ಹಾನಿ ಬಾರದು. ತಮ್ಮ ಆದರೋಪಚಾರಗಳಿಗೆ ಏನೂ ಕೊರತೆಯಾಗದು. ಅಪ್ಪಣೆಯಾದ ಕೂಡಲೆ ತಮ್ಮನ್ನು ದಿಲ್ಲಿಗೆ ಕಳುಹುವದಕ್ಕೆ ಈ ಪಠಾಣನು ಯಾವಾಗಲೂ ಸಿದ್ಧನಿರುವನು. ” ಎಂದು ಬಿನ್ನಯಿಸಿದನು.

ಶೇರಶಹನ ಈ ತರದ ವಿನಯದ ನುಡಿಗಳನ್ನು ಕೇಳಿ, ಅವನ ದೊಡ್ಡತನದ ನಡತೆಯನ್ನು ನೋಡಿ ಮಹಾರಾಣಿಗೆ ಆಶ್ಚರ್ಯವೆನಿಸಿತು. ವಿಶ್ವಾಸಘಾತ ಮಾಡಿದ ವಂಚಕನು ಇಂಥ ದೊಡ್ಡ ಮನುಷ್ಯನಿರಬಹುದೇ? ಶೇರಖಾನನು ‘ ಬೇಗಮ್‌ಸಾಹೇಬ ’ ಎಂದು ತನಗೆ ಸಂಬೋಧಿಸಿದ್ದನ್ನು ನೋಡಿ ರಾಣಿಯ ಹೃದಯವು ಉಕ್ಕಿ ಬಂದಿತು. ಆಗ ಆಕೆಯು ನೆಲದ ಕಡೆಗೆ ನೋಡುತ್ತ ಗದ್ಗದಿತ ಕಂಠದಿಂದ — “ ಅಪ್ಪಾ, ದೇವರು ನಿನಗೆ ಕಲ್ಯಾಣ ಮಾಡಲಿ; ಸೆರೆಯಾಳಾಗಿ ಕೈಗೆ ಸಿಕ್ಕ ಈ ದೈವಗೇಡಿ ಹೆಂಗುಸಿನೊಡನೆ ಈ ಪ್ರಕಾರದ ನಿನ್ನ ವಿನಯದ ನಡತೆಯು ನಿಜವಾದ ಪೂರತನಕ್ಕೂ ಘನತೆಗೂ ಒಪ್ಪುವಂಥದಿರುತ್ತದೆ. ಬಾದಶಹನ ಗತಿ ಏನಾಯಿತೋ ತಿಳಿಯಲಿಲ್ಲ. ನಮ್ಮನ್ನು ದಿಲ್ಲಿಗೆ ಕಳುಹಿಬಿಟ್ಟರೆ ಉಪಕಾರವಾಗುವದು ” ಎಂದಳು.

ಶೇರಶಹನು ನಮಸ್ಕಾರ ಮಾಡಿ ಬೇಗಮ್‌ಸಾಹೇಬ, ತಾವು ಸಿದ್ಧರಾಗಬೇಕು. ಈಗಲೇ ಅಪ್ಪಣೆಯ ಮೇರೆಗೆ ದಿಲ್ಲಿಗೆ ಕಳುಹುವೆನು ಎಂದನು.

ಆ ಕ್ಷಣವೇ ಮೇಣೆಯು ಸಿದ್ಧವಾಗಿ ಬಂದಿತು. ಶೇರಶಹನು ಸಂಗಡ ನೂರಾರು ಜನ ಕಾವಲುಗಾರರನ್ನು ಕೊಟ್ಟು, ಬಾದಶಹನ ಹೆಂಡತಿಯಾದ ಆಯೇಶಾಬಾನುವನು ದಿಲ್ಲಿಗೆ ಕಳುಹಿದನು.

## ೧೨



ದಿಲ್ಲಿಯ ಬಾದಶಹನನ್ನು ಸೋಲಿಸಿ ಶೇರಖಾನನು ಬಂಗಾಲ ಬಿಹಾರಗಳ ಸ್ವತಂತ್ರ ರಾಜನಾದನು. ಗೌಡದೇಶದ ಟಂಕಸಾಲೆಯಲ್ಲಿ ಅವನ ಹೆಸರಿನ ಅಚ್ಚು ಸಿದ್ಧಪಡಿಸಲ್ಪಟ್ಟಿತು. ಮಸೀದೆಗಳಲ್ಲಿ ಅವನ ಹೆಸರಿನಿಂದ ರಾಜಾಶೀರ್ವಾದವು ಆರಂಭವಾಯಿತು. ಶೇರಖಾನನು ಈಗ ‘ಸುಲ್ತಾನ ಶೇರಶಹ’ ನಾದನು.

ಸಂಜೆಯ ಮುಂದೆ ಏಕಾಂತವಾದ ಒಂದು ಸ್ಥಳದಲ್ಲಿ ಕುಳಿತುಕೊಂಡು ಶೇರನು— ‘ದಿಲ್ಲಿಯ ರಾಜ್ಯವನ್ನು ಸಂಪಾದಿಸದೆ ಈ ಸಣ್ಣ ಬಂಗಾಲ ಬಿಹಾರಗಳಿಂದ ಏನು ಪ್ರಯೋಜನ? ಯಾವ ರೀತಿಯಿಂದಾದರೂ ದಿಲ್ಲಿಯನ್ನು ಸಂಪಾದಿಸಲೇಬೇಕು.’ ಎಂದು ಆಲೋಚಿಸುತ್ತಿದ್ದನು. ಅವನು ಕುಳಿತ ಸ್ಥಳದಲ್ಲಿ ಬೆಳ್ಳಗೆ ಬೆಳದಿಂಗಳು ಬಿದ್ದಿತ್ತು. ಮೇಲೆ ಅನಂತವಾದ ಆಕಾಶದಲ್ಲಿ ಚಂದ್ರಕಿರಣಗಳು ಕಂಗೊಳಿಸುತ್ತಿದ್ದವು. ಮೇಲೆ ಕಾಣುವ ಅಪಾರವಾದ ಆಕಾಶವನ್ನು ನೋಡಿ ಅವನು — ‘ಮನುಷ್ಯನು ಈ ಅನಂತವಾದ ಆಕಾಶದ ಕೆಳಗೆ ಇಷ್ಟು ಸ್ವಲ್ಪಕ್ಕೇ ತೃಪ್ತಿಬಡುವದು ಯೋಗ್ಯವಲ್ಲ.’ ಎಂದು ನಿಶ್ಚಯಿಸಿದನು.

ಈ ಸಮಯದಲ್ಲಿ ಎಲ್ಲಿಂದಲೊ ಶಾಹೇನಶಾನು ಆ ಸ್ಥಳಕ್ಕೆ ಬಂದು ಶೇರಶಹನ ಹತ್ತಿರ ನಿಂತು - “ಮಗನೇ, ಏನ ಆಲೋಚಿಸುತ್ತೀಯೆ? ದಿಲ್ಲಿಯು ಬೇಗನೆ ನಿನ್ನ ವಶವಾಗುವದು. ನೀನು ಏನೇನ ಅಪೇಕ್ಷಿಸುವೆಯೋ ಅದೆಲ್ಲವೂ ಕೈಗೂಡುವದು. ಆದರೆ ಈ ವಿಶಾಲವಾದ ಸಾಮ್ರಾಜ್ಯವು ಬಹು ದಿವಸ ನಿಮ್ಮ ವಶದಲ್ಲಿ ಉಳಿಯಲಾರದು” “ಏಕೈ ನೀನು ಧರ್ಮವನ್ನು ಚೆನ್ನಾಗಿ ಕಾಪಾಡಲಿಲ್ಲ. ವಚನಕ್ಕೆ ಭಂಗವನ್ನು ತಂದುಕೊಂಡಿರುವೆ. ವಿಶ್ವಾಸಘಾತವನ್ನು ಮಾಡಿರುವೆ” ಎಂದು ನುಡಿದನು.

ಶಾಹೇನಶಾನ ಭವಿಷ್ಯವನ್ನು ಕೇಳಿ ಶೇರಶಹನ ಹೃದಯವು ನಡುಗಿತು. ಆದರೆ ಐಶ್ವರ್ಯದ ಮದದಲ್ಲಿ ಶೇರಶಹನು ಸ್ವಲ್ಪ ನಕ್ಕನು. ಏನೂ ಉತ್ತರ ಕೊಡಲಿಲ್ಲ.

ಶಾಹೇನಶಾನ ಹುಬ್ಬುಗಳು ಸ್ವಲ್ಪ ಗಂಟಿಕ್ಕಿದವು. ಅವನು ಮತ್ತೆ ಶೇರಶಹನನ್ನು ಕುರಿತು, “ದಿಕ್ಕಿಲ್ಲದ ಪರದೇಶಿಯಾಗಿದ್ದ ಫರಿದನೇ, ಒಂದು ದುಡ್ಡಿಗಾಗಿ ಒದೆದಾಡುತ್ತಿದ್ದ ಫರಿದನೇ, ಈಗ ಸಾಮ್ರಾಜ್ಯದ ಒಡೆಯನಾಗಿದ್ದರೂ ಜಗತ್ತಿನ ಒಡೆಯನನ್ನು ಮರೆಯಬೇಡ. ನಿನ್ನ ಕೈಕೆಳಗಿನ ಪ್ರಜೆಗಳ ಸುಖ ಸಮಾಧಾನಗಳಿಗಾಗಿ ಕೈಯಲ್ಲಾದಷ್ಟು ಪ್ರಯತ್ನಮಾಡಿ ನಿನ್ನ ಪಾಪದ ಹೊರೆಯನ್ನು ಸ್ವಲ್ಪ ಕಡಿಮೆ ಮಾಡಿಕೊಳ್ಳು” ಎಂದು ಉಪದೇಶ ಮಾಡಿದನು.

ಶೀರಶಹನಿಗೆ ಮೊದಲಿನ ನೆನಪು ಆಯಿತು. ಅವನ ಮೋಹವೆಲ್ಲ ನಷ್ಟವಾಯಿತು. ಬಳಿಕ ಪಶ್ಚಾತ್ತಾಪದಿಂದ ಶಾಹೇನಶಾನ ಪಾದಗಳನ್ನು ಹಿಡಿಯಕೊಳ್ಳಬೇಕೆಂದು ಕೈಚಾಚುತ್ತಿರುವಷ್ಟರಲ್ಲಿ ಆತನು ಕಾಣದಂತಾಗಿದ್ದನು.

ಶೀರಶಹನು ಆಗ ಮನಸ್ಸಿನಲ್ಲಿ ಕಳವಳಗೊಂಡು ಈ ಪ್ರಕಾರ ನಿಶ್ಚಯಿಸಿದನು- ಫಕೀರನ ಮಾತನ್ನು ನಡೆಸಬೇಕು. ಯಾವ ಪ್ರಜೆಗಳನ್ನು ಕಾಪಾಡುವ ಭಾರವನ್ನು ದೇವರು ನನಗೆ ಒಪ್ಪಿಸಿರುವನೋ ಆ ಪ್ರಜೆಗಳ ಸುಖಸಮಾಧಾನಗಳಿಗಾಗಿ ಸರ್ವಸ್ವವನ್ನು ಅರ್ಪಿಸುವೆನು ಪಾಪವನ್ನು ಮಾಡಿರುವೆನು— ಐಶ್ವರ್ಯ ಅಧಿಕಾರಗಳ ಲೋಭಕ್ಕಾಗಿ ಪಾಪವನ್ನು ಮಾಡಿರುವೆನು. ಮೊಗಲರನ್ನು ಮೋಸಗೊಳಿಸಿರುವೆನು. ಪ್ರಜೆಗಳ ಹಿತಕ್ಕೋಸ್ಕರ ಸರ್ವಸ್ವವನ್ನೂ ಸೂರೆಮಾಡಿ ಈ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವೆನು.

---

೧೩




ದು ದಿವಸ ಸಾಯಂಕಾಲದಲ್ಲಿ ಶೀರಶಹನು ಅಂತಃಪುರದಲ್ಲಿ ಕುಳಿತಿದ್ದನು. ಸಮೀಪದಲ್ಲಿ ಪ್ರೀತಿಯ ಹೆಂಡತಿ ಜೋಡೀದ ಉನ್ನೀಸಾ ಕುಳಿತಿದ್ದಳು ಎದುರಿಗೆ ಚಿಕ್ಕ ಮಗನು ಆಟವಾಡುತ್ತಿದ್ದನು. ಓಡುತ್ತಾಡುತ್ತ ಒಮ್ಮೆ ತಾಯಿಯ ಮೈಮೇಲೆ ಬೀಳುವನು; ಒಮ್ಮೆ ತಂದೆಯ ಕೊರಳಿಗೆ ಜೋಲು ಬೀಳುವನು. ಸುಮ್ಮಸುಮ್ಮನೆ ನಗುವನು. ಮಗನ ಈ ಆಟವನ್ನು ನೋಡಿ ತಾಯಿ ತಂದೆಗಳ ಮನಸ್ಸಿನಲ್ಲಿ ಹರ್ಷವು ಉಕ್ಕೇರಿ ಬರುತ್ತಿತ್ತು. ಅಸ್ತಂಗತನಾಗುತ್ತಿರುವ ಸೂರ್ಯನ ಕೆಂಪಾದ ಕಿರಣಗಳು ಕಿಡಕಿಯಿಂದ ಮನೆಯೊಳಗೆ ಬಿದ್ದಿದ್ದವು. ಆ ಬಾಲಕನ ಮೋರೆಯ ಮೇಲೂ ಆ ಕಿರಣಗಳು ಬಿದ್ದದರಿಂದ ಅದು ಬಹಳ ಮನೋಹರವಾಗಿ ತೋರುತ್ತಿತ್ತು. ಗಂಡಹೆಂಡಿರು ಆ ಬಾಲಕನ ಮೋರೆಯನ್ನು ನೋಡುತ್ತಿದ್ದರು.

ಈ ಸಮಯದಲ್ಲಿ ಆ ಹುಡುಗನು ತಂದೆಯ ಬಳಿಗೆ ಬಂದು ನಿಂತು ತನ್ನ ಪುಟ್ಟ ಕೈಯನ್ನು ಮುಂದೆ ಚಾಚಿ “ ಅಪ್ಪಾ, ನನಗೊಂದು ದುಡ್ಡು ಕೊಡೋ ” ಎಂದು ಬೇಡಹತ್ತಿದನು.

ಬಾದಶಹನ ಮುಖವು ಸಪ್ಪಗಾಯಿತು. ಕಣ್ಣಲ್ಲಿ ನೀರು ಬಂದವು. ನಿಟ್ಟುಸಿರು ಬಿಟ್ಟನು. ಮಗನ ಆ ಮಾತಿನಿಂದ ಬಹುಕಾಲದಿಂದ ಮರೆತು ಹೋದ ಒಂದು ದುಃಖವು ಅವನ ನೆನಪಿಗೆ ಬಂದಿತು. ಬಾಲಕನು ನಗುತ್ತ ನಗುತ್ತ ದುಡ್ಡನ್ನು ಬೇಡುತ್ತಿದ್ದನು. ಆದರೆ ತಂದೆಯ ಮೋರೆಯನ್ನು ನೋಡಿ ಮೆಲ್ಲನೆ ಕೈಮುಡಿಚಿಕೊಂಡನು. ಆನಂದದಿಂದ ಹಾರಾಡುತ್ತಿದ್ದ ಬಾಲಕನು ಸುಮ್ಮನೆ ಓರೆಗಾದನು.

ಪಟ್ಟದರಸಿಯಾದ ಜೋಬೇದ ಉನ್ನೀಸಾನು, ಬಾದಶಹನ ಆಕಾರವು ಒಮ್ಮೆಲೆ ಬೇರೆಯಾದದ್ದನ್ನು ನೋಡಿ ಬೆರಗುವಡೆದು ಕೆಲವು ವೇಳೆ ಸುಮ್ಮನೆ ಇದ್ದಳು. ಬಳಿಕ ಮೆಲ್ಲನೆ ಪ್ರೀತಿಯ ಮತ್ತು ದುಃಖದ ಸ್ವರದಿಂದ—“ ಒಡೆಯರೆ, ದಾಸಿಯು ತೊಂದರೆಬಡಿಸುವದಕ್ಕೆ ಕ್ಷಮೆಯಿರಲಿ, ಒಮ್ಮೆಲೆ ತಮ್ಮ ಮನಸ್ಸು ಏಕೆ ಉದಿಗ್ನವಾಯಿತೆಂಬದನ್ನು ತಿಳಿಯಲಾರದೆ ಕಳವಳಿಸುತ್ತೇನೆ. ತಮ್ಮ ಕಣ್ಣಲ್ಲಿ ನೀರೂ, ಮೋರೆಯ ಮೇಲೆ ದುಃಖದ ಚಿಹ್ನವೂ ಒಡೆದು ಕಾಣುತ್ತಿವೆ. ಜೀಯಾ, ಬಂಗಾರದ ಹೊಗೆ ಹಾಯುವ ಬಂಗಾಲ ಬಿಹಾರಗಳ ಅಧಿರಾಜರ ಕಣ್ಣಲ್ಲಿ ನೀರು ಬರುವದೆಂದರೆ ಅದಕ್ಕೇನೂ ಸಾಮಾನ್ಯಕಾರಣವಿರಲಾರದೆಂದು ತೋರುತ್ತದೆ. ತಮ್ಮ ದುಃಖದಲ್ಲಿ ನಾನೂ ಪಾಲುಗಾರ್ತಿಯಾಗಲು ಅಪೇಕ್ಷಿಸುತ್ತೇನೆ. ” ಎಂದಳು.

ಜೋಬೇದ ಉನ್ನೀಸಾನ ಮಾತುಗಳನ್ನು ಕೇಳಿ ಶೇರಖಾನನು ಅವಳ ಕಡೆಗೆ ನೋಡಿದನು. ಅವಳ ಗಲ್ಲದ ಮೇಲೆ ಕಣ್ಣೀರ ಹನಿಗಳು ಸುರಿಯುತ್ತವೆ. ಮಗನ ಕಡೆಗೆ ನೋಡಿದನು. ಅವನೂ ಮೋರೆಯನ್ನು ಸಪ್ಪಗೆ ಮಾಡಿಕೊಂಡು ಕುಳಿತಿದ್ದಾನೆ. ಶೇರಶಹನಿಗೆ ಹುಣ್ಣಿನ ಮೇಲೆ ಬರೆ ಎಳೆದಂತೆ ಮತ್ತೂ ವ್ಯಥೆಯಾಯಿತು. ಆದರೆ ಈ ಹೊಸವ್ಯಥೆಯು ಅವನ ಕಣ್ಣಲ್ಲಿ ಬಂದ ನೀರನ್ನು ಆರಿಸಿತು. ಅವನು ಮಗನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡನು. ಬಳಿಕ ಅರಸಿಯ ಕಡೆಗೆ ಮೋರೆ ಮಾಡಿ ಪ್ರಿಯೇ, ಶೇರನು ಮೊದಲಿನಿಂದಲೂ ಹೂವಿನ ಹಾಸಿಗೆಯ ಮೇಲೆ ಹೊರಳಾಡಿ ಬೆಳೆದವನಲ್ಲ. ಹಲವು ಕಲ್ಲುಮುಳ್ಳುಗಳು ಅವನ ಶರೀರಕ್ಕೆ ತಗಲಿರುವವು. ಅದೆಲ್ಲವನ್ನೂ ಹೇಳಿ ಈಗ ನಿನ್ನ ಮನಸ್ಸಿಗೆ ದುಃಖಕೊಡಲು ಬಯಸುವದಿಲ್ಲ. ಒಂದು ದಿವಸದ ಸುದ್ದಿಯನ್ನು ಮಾತ್ರ ಹೇಳುತ್ತೇನೆ. ಆದಿವಸ ಆದ ಕಷ್ಟವು ಮನಸ್ಸಿನಲ್ಲಿ ಸ್ಥಿರವಾಗಿ ಉಳಿದಿರುವದು. ಪ್ರಿಯೇ, ಒಂದು ದಿವಸ ( ಬಹಳ ದಿವಸದ ಹಿಂದಿನ ಸುದ್ದಿಯು )—ನಾನೂ ಈ ಮಗುವಿನಂತೆ ನಮ್ಮ ಅಪ್ಪನ ಬಳಿಯಲ್ಲಿ ನಿಂತುಕೊಂಡು ಒಂದು ದುಡ್ಡಿಗಾಗಿ ಹಟ ಮಾಡಿದ್ದೆನು. ಅಪ್ಪನು ನನಗೆ ದುಡ್ಡನ್ನು ಕೊಡಲಿಲ್ಲ. ದುಡ್ಡಿಗೆ ಬದಲಾಗಿ ಕೊಟ್ಟ ಅನಾದರದಿಂದ ಆ ಬಾಲ್ಯದಲ್ಲಿಯೇ ನನಗೆ ಈ ಲೋಕದಲ್ಲಿ ನನ್ನವರು ಯಾರೂ ಇಲ್ಲವೆಂದು ತೋರಿತು. ನಮ್ಮ ಅವ್ವನು ಆಗ ಇರಲಿಲ್ಲ, ತೀರಿಕೊಂಡಿದ್ದಳು; ಅಪ್ಪನು ಮಾತ್ರ ಇದ್ದನು. ನಡುನಡುವೆ ಅವನು ಸ್ವಲ್ಪ ಪ್ರೀತಿ ಮಾಡುವದನ್ನು ಕಂಡು ಅಪ್ಪನೇ ಎಲ್ಲ ಬಳಗವೆಂದು ತಿಳಿದಿದ್ದೆನು. ಆದರೆ ಆ ದಿವಸ ತಂದೆಯ ಪ್ರೀತಿಯು ನನ್ನ ಮೇಲೆ ಏನೂ ಇಲ್ಲವೆಂದು ತಿಳಿದೆನು. ನನ್ನ ಪಾಲಿಗೆ ಅವ್ವನು ಸತ್ತು ಇಲ್ಲ; ಅಪ್ಪನು ಇದ್ದೂ ಇಲ್ಲ; ಎಂದು ಎನಿಸಿತು. ಆ ದಿವಸವು ನನ್ನ ಬಹಳ ದುಃಖದ ದಿವಸವು. ಈ ಹೊತ್ತು ಈ ಮಗುವು ದುಡ್ಡಿಗಾಗಿ ಹಟಮಾಡೆ ನನ್ನ ಹಿಂದಿನ ಆ

ಕಷ್ಟವನ್ನು ನೆನಪಿಗೆ ತಂದಿತು. ಜೋಬೇದಾ, ಬಾಲ್ಯದ ಅನೇಕ ಸಂಗತಿಗಳು ಈಗ ನೆನಪಿಗೆ ಬರಹತ್ತಿವೆ. ಅಪ್ಪನು,– ಅಪ್ಪನ ತಪ್ಪಲ್ಲ; ನನ್ನ ದೈವವೇ ಕೆಟ್ಟದು; ಹಾಗಲ್ಲದಿದ್ದರೆ ಹುಟ್ಟುತ್ತಲೆ ನಾನು ತಾಯಿಯ ಹಾಲಿಗೆ ಏಕೆ ಎರವಾಗಬೇಕು? ತಾಯಿಗಿಂತ ಹೆಚ್ಚು ಪ್ರೀತಿಯುಳ್ಳ ದಾದಿಯನ್ನು ಏಕೆ ಕಳೆದುಕೊಳ್ಳುತ್ತಿದ್ದೆನು? ಅಪ್ಪನು ಎಷ್ಟಾದರೂ ಮನುಷ್ಯನು; ಎಂದ ಬಳಿಕ ಮನುಷ್ಯ ಸ್ವಭಾವದ ಮನಸ್ಸಿನ ದುರ್ಬಲತೆಯು ಬಿಟ್ಟು ಎಲ್ಲಿಗೆ ಹೋಗಬೇಕು? ನನ್ನ ಮಲತಾಯಂದಿರ ಅಂಜಿಕೆಗಾಗಿ ಅವನು ನನ್ನ ಮೇಲಿನ ಪ್ರೇಮುವನ್ನು ಮುಚ್ಚಿಡುತ್ತಿದ್ದನು. ಆದರೆ ಅವನು ಒಬ್ಬನೇ ಇದ್ದಾಗ ನಾನು ಬಳಿಗೆ ಹೋದರೆ ಪ್ರೀತಿ ಮಾಡುತ್ತಿದನು. ಈ ದಿನ ಅಪ್ಪನ ಆ ಪ್ರೀತಿಯು ನೆನಪಿಗೆ ಬಂದದರಿಂದ ಮನಸ್ಸು ಬಹಳ ವ್ಯಾಕುಲವಾಗಿದೆ. ಅಪ್ಪನನ್ನು ನೋಡದೆ ಬಹಳ ದಿನಗಳಾದವು, ಜೋಬೇದಾ, ನಾಳೆ ನಾನು 'ಸಾಸೇರಾಮ' ಕ್ಕೆ ಹೊರಡುವೆನು. ಒಮ್ಮೆ ಬಾಲ್ಯದ ಸುಖದುಃಖಗಳ ರಂಗಸ್ಥಳವಾದ ಜನ್ಮಭೂಮಿಯನ್ನು ನೋಡಿಕೊಂಡು ಬರುವೆನು. ಒಮ್ಮೆ ತಂದೆಯ ಪಾದಧೂಲಿಯನ್ನು ಮತ್ತು ತಾಯಿಯ ಸಮಾಧಿಯ ಧೂಲಿಯನ್ನು ತಲೆಯಲ್ಲಾಂತು ಪವಿತ್ರನಾಗಿ ಬರುವೆನು.

ಬಾದಶಹನ ಕಣ್ಣುಗಳಿಂದ ದಳವಳ ಕಣ್ಣೀರು ಉದುರಿದವು! ಮರುದಿವಸ ಶೀರಶಹನು ಸಾಸೇರಾಮಕ್ಕೆ ಹೊರಟು ಹೋದನು. ಬಾಲಕನಾದ ಫರಿದನು ಮನೆ ಬಿಟ್ಟು ಓಡಿಹೋದ ಬಳಿಕ ಪ್ರೀತಿಯಿಲ್ಲದ್ದರಿಂದಾಗಲಿ, ಹೆಂಡಿರ ಅಂಜಿಕೆಯಿಂದಾಗಲಿ ಹುಸೇನಖಾನನು ಮಗನನ್ನು ಹುಡುಕಿಸಲಿಲ್ಲ. ಆದರೆ ಉಳಿದ ಮಕ್ಕಳು ಆಡುವಾಗ, ಮೈಮೇಲೆ ಬಂದು ಬೀಳುವಾಗ, ಹಟ ಮಾಡುವಾಗ, ತಾನು ಅನಾದರ ಮಾಡಿದ ಮಗನ ವಿಷಯವು ಒಮ್ಮೊಮ್ಮೆ ನೆನಪಿಗೆ ಬಂದು ನಿಟ್ಟುಸಿರು ಬಿಡುತ್ತಿದ್ದನು.

ಆ ಮೇಲೆ ಎಷ್ಟೋ ದಿವಸಗಳು ಸಂದುಹೋದವು ಸಣ್ಣ ಸಣ್ಣ ಮಕ್ಕಳು ದೊಡ್ಡವರಾದರು. ಹುಸೇನಖಾನನ ಕರಿಯ ಕೂದಲು ಈಗ ಬೆಳ್ಳಗಾದವು. ಮಕ್ಕಳ ಹಾರಾಟದಿಂದಲೂ, ಉತ್ಸವಗಳಿಂದಲೂ, ನಂದನವನದಂತೆ ಮನಸ್ಸಿಗೆ ಆಹ್ಲಾದವನ್ನು ಕೊಡುವ ಮನೆಯು ಈಗ ಮಕ್ಕಳಲ್ಲಿಯ ಪರಸ್ಪರ ವೈರ, ಸವತಿಯರ ಹೊಟ್ಟೆಕಿಚ್ಚು ಮೊದಲಾದವುಗಳಿಂದ ಸ್ಮಶಾನದಂತೆ ಆಗಿ ಮುದುಕನಾದ ಹುಸೇನಖಾನನಿಗೆ ಸಂತಾಪವನ್ನು ಕೊಡುತ್ತಿತ್ತು.

ಕೊನೆಗೆ ಒಂದು ದಿವಸ ಅವನ ಈ ತಾಪವೆಲ್ಲ ಇಲ್ಲದಂತಾಗುವ ದಿವಸವು ಸಮೀಪಿಸಿತು. ಮನೆಯ ಹೊರಗಿನ ಕೋಣೆಯಲ್ಲಿ ಬೇನೆಯಿಂದ ಬಳಲುತ್ತ ಹುಸೇನಖಾನನು ಹಾಸಿಗೆಹಿಡಿದು ಮಲಗಿದ್ದನು. ಇಷ್ಟು ಜನ ಹೆಂಡಿರುಮಕ್ಕಳು ಇದ್ದರೂ ಒಬರೂ ಮುದುಕನ ಸೇವೆಯನ್ನು ವಹಿಸಿಕೊಂಡಿರಲಿಲ್ಲ. ಯಾರೂ ಆ ರೋಗಿಯ

ಕೋಣೆಯ ಬಳಿಗೆ ಸಹ ಬಂದಿರಲಿಲ್ಲ. ಮುದುಕನು ಒಬ್ಬನೆ ಬಡಬಡಿಸುತ್ತ ಹಾಸಿಗೆಯ ಮೇಲೆ ಹೊರಳಾಡುತ್ತಿದ್ದನು. ಈ ಕೊನೆಯ ಸಮಯದಲ್ಲಿ ನಂಬಿಗೆಯ ಸೇವಕನಾದ ಉಸ್ಮಾನನು ಮಾತ್ರ ಒಡೆಯನನ್ನು ಬಿಟ್ಟಿರಲಿಲ್ಲ.

ಉಸ್ಮಾನನು ಆ ಕೋಣೆಯ ಬಾಗಿಲಲ್ಲಿ ಕುಳಿತಿದ್ದನು. ಹುಸೇನಖಾನನ ಆಯುಷ್ಯವು ಇನ್ನೇನು ಹೆಚ್ಚು ಹೊತ್ತು ಉಳಿದಿರಲಿಲ್ಲ. ದೀರ್ಘನಿದ್ರೆಯು ತೀವ್ರವಾಗಿ ಹತ್ತತಕ್ಕದ್ದಿದ್ದದರಿಂದ ತೇಲುಗಣ್ಣು–ಮೇಲುಗಣ್ಣು ಹಾಕುತ್ತಿದ್ದನು. ಈ ಸಮಯದಲ್ಲಿ ಉಜ್ವಲವೇಷವುಳ್ಳ ಒಬ್ಬ ತರುಣನು ಆ ಮನೆಯ ಬಾಗಿಲಲ್ಲಿ ಬಂದುನಿಂತು ಉಸ್ಮಾನನನ್ನು ಕುರಿತು—“ ಖಾನಸಾಹೇಬರು ಎಲ್ಲಿ ಇರುತ್ತಾರೆ? ” ಎಂದು ಕೇಳಿದನು.

ಉಸ್ಮಾನನು ಅಳತೊಡಗಿದನು. ಒಮ್ಮೆಲಿ ಬಂದ ಈ ಹೊಸ ಮನುಷ್ಯನನ್ನು ನೋಡಿ ಸ್ವಲ್ಪ ಚಕಿತನಾದನು. ಆದರೆ ಅವನಿಂದ ಏನೂ ಮಾತಾಡುವದಾಗಲಿಲ್ಲ. ಸುಮ್ಮನೆ ಹುಸೇನಖಾನನ ಹಾಸಿಗೆಯ ಕಡೆಗೆ ಬೆರಳು ಮಾಡಿದನು. ಈ ಹೊಸಬನು ಒಳಗೆ ಹೊಕ್ಕು ಹಾಸಿಗೆಯ ಬದಿಯಲ್ಲಿ ನಿಂತುಕೊಂಡನು. ಆಗ ಮರಣವು ಸಮೀಪಿಸಿದ್ದರಿಂದ ಹುಸೇನನ ಕಣ್ಣುಗಳು ಮುಚ್ಚಿದ್ದವು.

ಹೊಸಬನು ಅತಿಶಯವಾದ ದು:ಖದಿಂದ ಕುತ್ತಿಗೆಯುಬ್ಬಲು ಗದ್ಗದಿತ ಸ್ವರದಿಂದ–ಅಪ್ಪಾ, ನಾನು ಫರಿದನು; ನಿಮ್ಮ ಫರಿದನು ಬಂದಿರುತ್ತಾನೆ, ಅಪ್ಪಾ, ಕಣ್ಣ ತೆರೆಯಿರಿ, ಎಂದು ಒದರಿ ಹೇಳಿದನು. ಆದರೆ ಈ ಕೂಗು ಮಹಾಯಾತ್ರೆಗೆ ಹೊರಟ ಆ ಮುದುಕನ ಕಿವಿಗೆ ಮುಟ್ಟಿತೋ ಇಲ್ಲವೋ ಹೇಗೆ ತಿಳಿಯಬೇಕು? ಹುಸೇನನಿಗೆ ಕಣ್ಣ ತೆರೆಯುವದಕ್ಕಂತೂ ಆಗಲೇ ಇಲ್ಲ. ಅವನ ತುಟಿಯು ಮಾತ್ರ ಸ್ವಲ್ಪ ನಡುಗಿತು. ಮೋರೆಯ ಮೇಲೆ ಸ್ವಲ್ಪ ಸಮಾಧಾನದ ಚಿಹ್ನವು ತೋರಿತು.

ಶೇರಶಹನು ಹಾಸಿಗೆಯ ಮೇಲೆ ಕುಳಿತು ತಂದೆಯ ಪಾದಗಳನ್ನು ತಲೆಯ ಮೇಲೆ ಇಟ್ಟುಕೊಂಡನು. ಆ ಮೇಲೆ ಕುತ್ತಿಗೆಸಿರಗಳು ಉಬ್ಬಿರಲು ಗದ್ಗದಿತ ಧ್ವನಿಯಿಂದ ಅಪ್ಪಾ, ಅಪ್ಪಾ ಎಂದು ಹುಡುಗನಂತೆ ಅಳಹತ್ತಿದನು. ಆದರೆ ಹುಸೇನನ ಮುಚ್ಚಿಹೋದ ಕಣ್ಣುಗಳು ಆ ಅಳುವಿನಿಂದ ತೆರೆಯಲಿಲ್ಲ. ಹುಸೇನಖಾನನು ಮಗನ ಬಾದಶಾಹಿಯ ಏಳಿಗೆಯನ್ನು ನೋಡಲಿಲ್ಲ.

ಕೆಲವು ಹೊತ್ತು ಸಣ್ಣ ಹುಡುಗನಂತೆ ಅತ್ತು ಅತ್ತು ಕಣ್ಣೀರ ಸುರಿಸಿ ಶೇರಖಾನನು ಮನಸ್ಸನ್ನು ಸ್ವಲ್ಪ ಗಟ್ಟಿಮಾಡಿದನು. ಹುಸೇನಖಾನನ ಮನೆಯಿಂದ ಸ್ವಲ ದೂರದಲ್ಲಿ ಒಂದು ಮಾವಿನ ತೋಪು ಇತ್ತು. ಆ ತಂಪಾದ ತೋಪಿನಲ್ಲಿ ಶೇರಶಹನು ತಂದೆಯ ಸಮಾಧಿಯನ್ನು ಮಾಡಿದನು. ಜೇನ್ನತ ಉಸ್ನೇನಾನ ಸಮಾಧಿಯೂ ಅದೇ ತೋಪಿನಲ್ಲಿತ್ತು. ಶರಶೇಹನು ಅವರ ಪವಿತ್ರವಾದ ಧೂಲಿಯನ್ನು ತಲೆಯ ಮೇಲೆ

ಇಟ್ಟುಕೊಂಡು ಆ ಪ್ರೇಮದ ಸಮಾಧಿಯ ಮೇಲೆ ಕಣ್ಣೀರ ಸುರಿಸುತ್ತ ಬಹು ಕಷ್ಟದಿಂದ ಗೌಡನಗರಕ್ಕೆ ತಿರುಗಿ ಬಂದನು.

---

## ೧೩



ಶೇರಶಹನು ಬಂಗಾಲವನ್ನು ಜಯಿಸಿಕೊಂಡ ಬಳಿಕ ಕೆಲವು ದಿವಸಗಳು ಸಂದುಹೋದವು. ಒಂದಾನೊಂದು ದಿವಸ ಒಬ್ಬ ಗೂಢಚಾರನು ಶೇರ ಶಹನ ಬಳಿಗೆ ಬಂದು ಈ ಪ್ರಕಾರ ಹೇಳಿದನು:- “ ಹುಮಾಯುನ ಬಾದಶಹನು ಉಳಿದ ಸೇನೆಯೊಡನೆ ದಿಲ್ಲಿಯನ್ನು ಸೇರಿರುತ್ತಾನೆ. ಹಿಂಡಾಲನು ದಿಲ್ಲಿ ಯನ್ನು ಬಿಟ್ಟು ಓಡಿಹೋಗಿರುವನು. ಮೊಗಲರು ಪಠಾಣರನ್ನು ನಿರ್ಮೂಲ ಮಾಡು ವ ಸಿದ್ಧತೆಯಲ್ಲಿ ತೊಡಗಿರುತ್ತಾರೆ. ”

ಮೊಗಲರಿಗೆ ಈಗ ಅವಕಾಶ ಕೊಡುವದು ಯೋಗ್ಯವಲ್ಲವೆಂದು ಶೇರನು ನಿಶ್ಚ ಯಿಸಿದನು. ಮರುದಿವಸವೇ ಮೊಗಲರನ್ನು ಮುರಿಬಡಿಯುವದಕ್ಕಾಗಿ ಪಠಾಣ ಸೇನೆ ಯು ದಿಲ್ಲಿಗೆ ಹೊರಟಿತು. ಕನೋಜದ ಬಳಿಯಲ್ಲಿ ಪಠಾಣರು ಮೊಗಲರಿಗೆ ಎದು ರಾದರು.

ಪರಾಕ್ರಮಶಾಲಿಗಳಾದ ತುರ್ಕಿ ದಂಡಾಳುಗಳು, ಪಠಾಣರು ಮಾಡಿದ ವಿಶ್ವಾ ಸಘಾತದ ಸೇಡು ತೀರಿಸಿಕೊಳ್ಳುವದಕ್ಕಾಗಿ ಜೀವದ ಹಂಗುದೊರೆದು ಕಾದುತ್ತಿದ್ದರು. ಅವರ ಸಾಣೆ ಹಿಡಿದ ಖಡ್ಗಗಳು ಪಠಾಣರ ರಕ್ತದಿಂದ ಕೆಂಪಗಾಗಿ ಹೋಗಿವೆ. ಅವರ ಭಯಂಕರವಾದ ತೋಫುಗಳ ಏಟಿಗೆ ಎಷ್ಟೋ ಪಠಾಣರ ದೇಹಗಳು ಆಹುತಿಯಾ ಗಿ ಬೀಳುತ್ತವೆ!

ಆದರೆ ಪಠಾಣರು ಹಿಂದಕ್ಕೆ ಸರಿಯುವವರಲ್ಲ. ತುರ್ಕಿ ಸಿಪಾಯಿಗಳ ತೋಫಿ ನ ಏಟನ್ನೂ ಖಡ್ಗಗಳ ಹೊಡೆತವನ್ನೂ ಲೆಕ್ಕಿಸದೆ ಸಾಯುತ್ತ ಕೆಡುತ್ತ ಪಠಾಣರು ಮೊಗಲ ಸೇನೆಯನ್ನು ಭೇದಿಸಿ ಒಳಹೊಕ್ಕರು. ಮೊಗಲರು ಅಂಜಿ ಬೆಂಗೊಟ್ಟರು. ಹುಮಾಯುನ ಬಾದಶಹನು ಪಠಾಣರಿಗೆ ಮತ್ತೆ ಸೋತನು. ಮತ್ತೆ ಓಡಿಹೋದನು.

ಅಂಜಿ, ಕಂಗೆಟ್ಟು ಓಡಿಹೋದ ಹುಮಾಯುನನು ಸಿಂಧುನದಿಯ ಮರುಭೂ ಮಿಯನ್ನು ದಾಟಿ, ಹಿಂದುಸ್ಥಾನದ ಸಿಂಹಾಸನದ ಆಶೆಯನ್ನು ತೊರೆದು ಇರಾಣಕ್ಕೆ ಹೊರಟು ಹೋದನು.

ಶೇರಶಹನು ಆಗ್ರಾದಲ್ಲಿ ಸಿಂಹಾಸನವನ್ನು ಸ್ಥಾಪಿಸಿ ದಿಲ್ಲೀ ಸಾಮ್ರಾಜ್ಯದ ಚಕ್ರವರ್ತಿಯಾದನು. ಪಂಜಾಬದಿಂದ ಬಂಗಾಲದ ವರೆಗೆ ಮತ್ತೆ ಪಠಾಣರ ರಾಜಸತ್ತೆಯು ನೆಲೆಗೊಂಡಿತು. ರಾಜ್ಯದಲ್ಲಿ ಎಲ್ಲ ಕಡೆಗಳಲ್ಲಿ ಸುವ್ಯವಸ್ಥೆಯನ್ನು ನೆಲೆಗೊಳಿಸುವದಕ್ಕಾಗಿ ಬಾದಶಹನು ಬುದ್ಧಿವಂತರಾದ ಮುತ್ಸದ್ದಿಗಳನ್ನು ನಿಯಮಿಸಿದನು. ದರ್ಬಾರದಲ್ಲಿಯೂ, ಆಲೋಚನಾ ಸಭೆಯಲ್ಲಿಯೂ ಮುಸಲ್ಮಾನರನ್ನೂ ಹಿಂದುಜನರನ್ನೂ ಭೇದವಿಲ್ಲದೆ ಸೇರಿಸಿದನು. ಈ ಪ್ರಕಾರದ ವ್ಯವಸ್ಥೆಯಲ್ಲಿ ಒಂದು ವರ್ಷವು ಕಳೆದು ಹೋಯಿತು.

ಹೊಸ ವರ್ಷದ ಆರಂಭದ ಶುಭ ದಿವಸದಲ್ಲಿ ಬಾದಶಹನು ದರ್ಬಾರಕ್ಕೆ ಬಂದು ಸಿಂಹಾಸನದಲ್ಲಿ ಕುಳಿತುಕೊಂಡನು. ಮಾಂಡಲಿಕರು, ಮಂತ್ರಿಗಳು, ಸೇನಾಪತಿಗಳು, ಸಭ್ಯಗೃಹಸ್ಥರು ಸಾಲಾಗಿ ನಿಂತು ಬಾದಶಹನಿಗೆ ಮುಜ್ರೆ ಮಾಡಿದರು. ಬಾದಶಹನ ಎದುರಿಗೆ ಬಂಗಾರದ ಒಂದು ದೊಡ್ಡ ತಟ್ಟೆಯಿಡಲ್ಪಟ್ಟಿತ್ತು. ಕಾಣಿಕೆ ಕೊಟ್ಟ ಮುತ್ತುಗಳು, ರತ್ನಗಳು ಚಿನ್ನದ ನಾಣ್ಯಗಳು ಇವುಗಳಿಂದ ಅದು ತುಂಬಿಹೋಯಿತು. ಬಾದಶಹನು ಒಮ್ಮೆ ಅದನ್ನು ಕೈಯಿಂದ ಮುಟ್ಟಿ ಅಂಗೀಕಾರ ಮಾಡಿದನು. ಆ ಬಳಿಕ ಮುಖ್ಯ ಮಂತ್ರಿಯನ್ನು ಕುರಿತು—"ರಾಜ್ಯದ ಎಲ್ಲ ದುಡ್ಡು, ಪ್ರಜೆಗಳ ಹಿತಕ್ಕಾಗಿ ವೆಚ್ಚಮಾಡಲ್ಪಡುವದು. ಶೇರಶಹನು ಈ ಅಪಾರವಾದ ಸಂಪತ್ತಿಯಲ್ಲಿ ಒಂದು ಕವಡೆಯನ್ನಾದರೂ ತನ್ನ ಸಲುವಾಗಿ ವೆಚ್ಚಮಾಡಲಾರನು. ಎಂಬದಾಗಿ ರಾಜ್ಯದ ಎಲ್ಲ ಭಾಗಗಳಲ್ಲಿಯೂ ಡಂಗುರ ಹೊಡೆಯಿಸು." ಎಂದು ಅಪ್ಪಣೆ ಮಾಡಿದನು ಆನಂದ, ಆಶ್ಚರ್ಯ, ಭಕ್ತಿ, ಕೃತಜ್ಞತೆಗಳಿಂದ ನೆರೆದ ಜನರೆಲ್ಲ ಬಾದಶಹನ ಜಯಜಯಕಾರ ಮಾಡಿದರು.

ತರುವಾಯ ಮುಖ್ಯ ಮಂತ್ರಿಯು ನಮಸ್ಕಾರ ಮಾಡಿ "ಜೀಯಾ, ಒಡೆಯರ ಅಪ್ಪಣೆಯಂತೆ ಈಗ ಸುವರ್ಣಗ್ರಾಮದಿಂದ ಸಿಂಧುನದಿಯ ವರೆಗೆ ರಾಜಮಾರ್ಗವನ್ನು ಸಿದ್ಧಪಡಿಸುವ ಕೆಲಸವನ್ನು ಆರಂಭ ಮಾಡಿದ್ದೇನೆ." ಎಂದು ಬಿನ್ನಯಿಸಿದನು.

ಅದಕ್ಕೆ ಶೇರಶಹನು—"ಒಳ್ಳೆಯದಾಯಿತು. ದಣಿದು ಬಳಲಿದ ದಾರಿಕಾರರು ಗಿಡಗಳ ನೆಳಲಲ್ಲಿ ವಿಶ್ರಾಂತಿಯನ್ನು ಹೊಂದುವಂತೆ ಆ ರಾಜಮಾರ್ಗದ ಎರಡೂ ಬದಿಗಳಲ್ಲಿ ಗಿಡಗಳನ್ನು ನೆಡುವ ವ್ಯವಸ್ಥೆಯನ್ನು ಮಾಡಬೇಕು. ಎರಡು ಹರದಾರಿಗೊಂದು ಬಾವಿಯನ್ನು ಕಡಿಸಬೇಕು ಎರಡು ಹರದಾರಿಗೊಂದು ಧರ್ಮಶಾಲೆಯನ್ನು ಕಟ್ಟಿಸಬೇಕು. ದಾರಿಕಾರರು ಸರಕಾರದ ವೆಚ್ಚದಿಂದ ಅಲ್ಲಿ ಆಹಾರವನ್ನು ಪಡೆಯುವಂತೆ ವ್ಯವಸ್ಥೆ ಮಾಡಬೇಕು. ಈ ಧರ್ಮಶಾಲೆಗಳಲ್ಲಿ ಮುಸಲ್ಮಾನರಿಗೂ, ಹಿಂದುಗಳಿಗೂ ಸಮಾನವಾದ ವ್ಯವಸ್ಥೆಯು ಇರತಕ್ಕದ್ದು. ದೇವರು ಇಬ್ಬರ ಸಂರಕ್ಷಣದ ಭಾರವನ್ನೂ ನನ್ನ ಮೇಲೆ ಇಟ್ಟಿರುತ್ತಾನೆ" ಎಂದನು.

ಮುಖ್ಯ ಮಂತ್ರಿಯಾದ ಜಾಫರಖಾನನು ಒಡೆಯನ ಅಪ್ಪಣೆಯನ್ನು ತಲೆವಾಗಿ ಅಂಗೀಕರಿಸಿ ನಮಸ್ಕರಿಸಿದನು.

ಕಂದಾಯದ ಮಂತ್ರಿಯಾದ ತೋಡರಮಲ್ಲನು — ಜೀ.ರಾ, ಚಕ್ರವರ್ತಿಯವರ ಅಪ್ಪಣೆಯಂತೆ ಬಂಗಾಲದಿಂದ ಪಂಜಾಬದವರೆಗೆ ಎಲ್ಲ ಭೂಮಿಯು ಸಾಗುವಾ ಡಿಸಲ್ಪಟ್ಟಿದೆ. ಉತ್ಪನ್ನದ ಲೆಕ್ಕವು ಸರಿಯಾಗಿ ಇಡಲ್ಪಟ್ಟಿದೆ. ಎಂದು ಬಿನ್ನಯಿಸಿದನು.

ಆದಕ್ಕೆ ಶೇರಶಹನು:— ರಜಪೂತವೀರರೇ, ನಿಮ್ಮ ಕಾರ್ಯಸಾಮರ್ಥ್ಯವು ಹೊಗ ಳತಕ್ಕಂಥದು. ಉತ್ಪನ್ನದ ನಾಲ್ಕರಲ್ಲಿ ಒಂದು ಪಾಲು ಸರಕಾರದ ಕಂದಾಯವನ್ನು ಎತ್ತಬೇಕು. ಇದಕ್ಕೂ ಹೆಚ್ಚಿಗೆ ತೆಗೆದುಕೊಂಡರೆ ಪ್ರಜೆಗಳಿಗೆ ಕಷ್ಟವಾಗುವದು ಎಂದು ಹೇಳಿದನು.

---

## ೧೫



ಮುಂದೆ ಕೆಲವು ದಿವಸಗಳಾದ ಬಳಿಕ ಶೇರಶಹನು ಅಸಂಖ್ಯ ಸೇನೆಯೊಡನೆ ' ಕಲಿಂಜರ ' ಕೋಟೆಯನ್ನು ಮುತ್ತಿದನು. ಆದರೆ ಏನು ಮಾಡಿದರೂ ಆ ದುರ್ಭೇದ್ಯವಾದ ಕೋಟೆಯು ವಶವಾಗಲಿಲ್ಲ. ಪರಾಕ್ರಮಶಾಲಿಗಳಾದ ಬುಂದೇಲಾವೀರರು ಜೀವದ ಹಂಗುದೊರೆದು ಕಾದುತ್ತಿದ್ದದರಿಂದ ಪಠಾಣರ ಮುತ್ತಿಗೆಯು ವ್ಯರ್ಥವಾಗಿತ್ತು. ಕೋಟೆಯನ್ನು ಗೆದ್ದೇ ತೀರಬೇಕೆಂದು ಈ ದಿವಸ ಶೇರಶಹನು ಆಗ್ರಹದಿಂದ ನಡುವು ಕಟ್ಟಿ ನಿಂತಿದ್ದನು

ತೋಫುಖಾನೆಯ ದಂಡಿನ ಹಿಂದೆ ನಿಂತುಕೊಂಡು ಬಾದಶಹನು ಆವೇಶದ ನುಡಿಗಳಿಂದ ವೀರರಾದ ಪಠಾಣರಿಗೆ ಉತ್ತೇಜನ ಕೊಡುತ್ತಿದ್ದನು. ಸಮೀಪದಲ್ಲಿ ಹಾರುತ್ತಿದ್ದ ಮದ್ದಿನ ಧೂಳಿಯಿಂದ ಆತನ ಬಿಳಿಯ ಉಡುಪೂ ಮೈಯೂ ಕಪ್ಪಾಗುತ್ತ ಬಂದಿದ್ದವು.

ತಲೆಯ ಮೇಲೆ ಬೇಸಗೆಯ ಸೂರ್ಯನ ಪ್ರಖರವಾದ ಬಿಸಿಲು ಬೆಂಕೆಯಂತೆ ಸುಡುತ್ತಿದೆ. ಎಡಬಲಗಳಲ್ಲಿಯೂ ಮುಂದುಗಡೆಯಲ್ಲಿಯೂ ದೊಡ್ಡ ದೊಡ್ಡ ತೋಫುಗಳು ಭಯಂಕರ ಅಗ್ನಿವೃಷ್ಟಿಯನ್ನೇ ಮಾಡತೊಡಗಿವೆ. ಕೋಟೆಯೊಳಗಿಂದ ತೋಫಿನ ಗುಂಡುಗಳು ಬೆಂಕೆಯ ಗುಂಡುಗಳಂತೆ ಸುತ್ತಲು ಬಂದು ಬೀಳತೊಡಗಿವೆ ಇಂಥ ಅಪಾಯದ ಸ್ಥಳದಲ್ಲಿ ನಿಂತುಕೊಂಡು ದಿಲ್ಲಿಯ ಬಾದಶಹನು ಒಂದು ಸಣ್ಣ ಕೋಟೆಗಾಗಿ ವಿಲಕ್ಷಣ ಪ್ರಯತ್ನ ಮಾಡುತ್ತಾನೆ! ಕೇವಲ ಮೃತ್ಯುವಿನ ಬಾಯಲ್ಲಿ ಟೊಂಕಕಟ್ಟಿ ನಿಂತಿರುತ್ತಾನೆ!

ಯಾವನಿಗೆ ಒಂದಾನೊಂದು ಕಾಲದಲ್ಲಿ ಕಾಲಿಡುವಷ್ಟು ಸ್ಥಳವು ಕೂಡ ಇರ ಲಿಲ್ಲವೋ ಅವನಿಗೆ ಈಗ ಇಡಿ ಆರ್ಯಾವರ್ತವು ದೊರೆತಿದ್ದರೂ ತೃಪ್ತಿ ಇಲ್ಲ! ಬುಂ ದೇಲಾಜನರ ಒಂದು ಸಣ್ಣ ಕೋಟೆಗಾಗಿ ದಿಲ್ಲಿಯ ಚಕ್ರವರ್ತಿಯು- ಹಿಂದುಸ್ಥಾನದ ಬಾದಶಹನು- ತಲೆಯ ಮೇಲೆ ಬೆಂಕೆ, ಸುತ್ತಲು ಬೆಂಕೆ, ಇಂಥ ಇಕ್ಕಟ್ಟಿನಲ್ಲಿ ನಿಂತಿ ರುತ್ತಾನೆ! ಎಲೈ ಲೋಭವೇ. ನಿನ್ನ ಬಲೆಗೆ ಸಿಕ್ಕಿಬಿದ್ದವನು ಸಂಪೂರ್ಣ ಪೃಥ್ವಿಯ ನ್ನು ಹೊಂದಿಯೂ ತೊಂದರೆಬಡುತ್ತಾನಲ್ಲವೇ? ಆತನಿಗೆ ಎಂದೂ ಶಾಂತಿಯಿಲ್ಲ!

ಈ ಸಮಯದಲ್ಲಿ ಒಬ್ಬ ಸೈನಿಕನು ಬಹಳ ಒತ್ತರದಿಂದ ತೋಫು ಹಾರಿಸು ತ್ತಿದ್ದನು. ಶೇರಶಹನು ಆತನ ಹಸ್ತಲಾಘವವನ್ನು ನೋಡಿ ಅವನ ಸಮೀಪಕ್ಕೆ ಬಂದು ನಿಂತನು ಆ ಸೈನಿಕನು ಹಿಂದಿರುಗಿ ನೋಡುತ್ತಾನೆ; ಬಾದಶಹನು. ಅವನ ಕಣ್ಣು ಕೆಂಪಗಾದವು. ಕೈಯ ಒತ್ತರವು ಸ್ವಲ್ಪ ಕಡಿಮೆಯಾಯಿತು. ಆ ಸೈನಿಕನು ಸ್ವಲ್ಪ ವೇಳೆ ಸುಮ್ಮನೆ ನಿಂತನು ಆಗ ಬಾದಶಹನು—“ ಸೈನಿಕಶ್ರೇಷ್ಠನೇ, ನಿನ್ನ ಹಸ್ತ ಲಾಘವವನ್ನು ಕಂಡು ಬಹಳ ಸಂತೋಷಗೊಂಡೆನು. ಯುದ್ಧವು ಮುಗಿದ ಬಳಿಕ ನಿನಗೆ ತಕ್ಕ ಮರ್ಯಾದೆಯನ್ನು ಮಾಡುವೆನು. ” ಎಂದನು. ಆ ಸೈನಿಕನು ಸ್ವಲ್ಪ ನಕ್ಕನು. ಏನೂ ಮಾತಾಡಲಿಲ್ಲ. ಅವನ ಕಣ್ಣುಗಳು ಮತ್ತೆ ಕೆಂಪಗಾದವು.

ಹಿಂದೆ ಮದ್ದಿನ ಕೋಣೆ; ಎದುರಿಗೆ ತೋಫುಗಳು; ಇವುಗಳ ಮಧ್ಯಭಾಗ ದಲ್ಲಿ ಬಾದಶಹನು ನಿಂತಿದ್ದನು. ಆ ಸೈನಿಕನು ಮದ್ದಿನ ಕೋಣೆಯ ಕಡೆಗೆ ತೀಕ್ಷ್ಣ ದೃಷ್ಟಿಯಿಂದ ನೋಡಿದನು. ಆ ಮೇಲೆ ಅವನು- ಬಾದಶಹನೇ, ರೋಟಸಗಡದಲ್ಲಿ ನೀನು ನಡೆಸಿದ ಕಪಟತಂತ್ರವು ಮನಸ್ಸಿನಲ್ಲಿ ನಟ್ಟಿದೆ. ಈ ದಿವಸ ಅದಕ್ಕೆ ಪ್ರಾಯಶ್ಚಿತ್ತವು; ಎಂದು ಹೇಳುತ್ತ ಹೇಳುತ್ತ ಮದ್ದಿನ ಕೋಣೆಗೆ ಬೆಂಕೆಯಿಟ್ಟನು. ಭಯಂಕರವಾದ ಶಬ್ದಮಾಡಿ ಮದ್ದಿನ ಕೋಣೆಯು ಉರಿಯತೊಡಗಿತು ಬಾದಶಹನು ತಾನು ನಿಂತ ಸ್ಥಳದಿಂದ ಜೀವುಗೊಟ್ಟು ಹಾರಿದನು. ಆದರೆ ಪಾರಾಗಲಿಲ್ಲ. ಮದ್ದಿನ ಉರಿಯಿಂದ ಮೈಯೆಲ್ಲ ಹುರುಪಳಿಸಿ ಹೋಯಿತು.

ದಿಙ್ಮಂಡಲವೆಲ್ಲ ಪ್ರತಿಧ್ವನಿಗೊಡುವಂತೆ ಸಪ್ಪಳಮಾಡುತ್ತ ಆ ಅಗ್ನಿಯು ತನ್ನ ಭಯಂಕರವಾದ ಜ್ವಾಲೆಗಳನ್ನು ನಾಲ್ಕೂ ಕಡೆಗೆ ಚಾಚಿತು. ಆ ಮೃತ್ಯುವಿನ ನಾಲಿ ಗೆಗಳಿಗೆ ಹಲವರು ಪರಾಣರು ತುತ್ತಾದರು. ಆ ಮದ್ದಿನ ಕೋಣೆಗೆ ಕೊಳ್ಳಿಯ ಕೊಟ್ಟ ಸೈನಿಕನೂ ಆ ಜ್ವಾಲೆಯಲ್ಲಿ ಸುಟ್ಟು ಹೋದನು.

ಮೈಸುಟ್ಟದ್ದರಿಂದ ಅತ್ಯವಸ್ಥನಾಗಿ ಬಿದ್ದಿರುವ ಬಾದಶಹನನ್ನು ಪಾಳಯಕ್ಕೆ ತಂದರು ಮೈಯೆಲ್ಲ ಪೂರ್ಣವಾಗಿ ಬೆಂದುಹೋಗಿತ್ತು. ಆದರೂ ಮುಖದ ಮೇಲೆ ವ್ಯಸನದ ಚಿಹ್ನವೂ ಕೂಡ ಇರಲಿಲ್ಲ. ಇಂಥ ಮರಣಾವಸ್ಥೆಯಲ್ಲಿದ್ದರೂ ಆ ಪಠಾ ಣವೀರನು ಕೋಟೆಯ ಜಯದ ಸುದ್ದಿಯನ್ನೇ ಮೆಲ್ಲನೆ ಕೇಳುತ್ತಿದ್ದನು. ಬಾದಶಹನ

ಈ ಆಗ್ರಹವನ್ನು ಕಂಡು ಸೈನಿಕರು ಮತ್ತೆ ಜೀವದ ಹಂಗುದೊರೆದು ಕಾದಿ ಕೋಟೆಯನ್ನು ವಶಮಾಡಿಕೊಂಡರು. ಕೊತ್ತಳದ ಮೇಲೆ ಪಠಾಣರ ಜಯಧ್ವಜವನ್ನೂರಿ ಸೇನಾಪತಿಯಾದ ಖಾವಾಸಖಾನನು ಬಾದಶಹನ ಶಿಬಿರಕ್ಕೆ ಬಂದನು.

ಬಾದಶಹನ ಶರೀರವನ್ನು ನೋಡಲು ಆ ಪ್ರಭುಭಕ್ತನ ಕಣ್ಣಲ್ಲಿ ನೀರು ಬಂದವು ಆಗ ಅವನು ಪ್ರಣಾಮ ಮಾಡಿ ಚಕ್ರವರ್ತಿಯೇ, ಸೇವಕನು ಬುಂದೇಲರನ್ನು ಜಯಿಸಿ ಕೋಟೆಯ ಮೇಲೆ ಶೇರಶಾಹಿ ಧ್ವಜವನ್ನು ನಿಲ್ಲಿಸಿ ಬಂದಿರುತ್ತಾನೆ; ಎಂದು ಹೇಳಿದನು. ಆಗ ಸಾಯಲಾದ ಬಾದಶ್ಶಹನ ಮುಖವು ಅರಳಿತು. ಸೇನಾಪತಿಗೆ ಕೂಳಿತುಕೊಳ್ಳುವದಕ್ಕೆ ಸನ್ನೆಮಾಡಿ ಮಗನಾದ ಸೇಲೀಮನ ಕಡೆಗೆ ನೋಡಿದನು. ಅವನ ಅಭಿಪ್ರಾಯವನ್ನು ತಿಳಿದು ಪಿತೃಭಕ್ತನಾದ ಆ ಸೇಲೀಮನು ತಂದೆಯ ಬಾಯಲ್ಲಿ ಸುವಾಸಿಕವಾದ ಪಾನಕವನ್ನು ಸ್ವಲ್ಪ ಹಾಕಿದನು. ಅದರಿಂದ ನಾಲಿಗೆ ಹಸಿಯೊಡೆಯಲು ಬಾದಶಹನು ಮೆಲ್ಲಮೆಲ್ಲನೆ ಈ ಪ್ರಕಾರ ಮಾತಾಡಿದನುಃ—ಮಿತ್ರಾ, ಖಾವಾಸಖಾನನೇ, ನನ್ನ ಬಯಕೆಯು ಸಂಪೂರ್ಣವಾಯಿತು ಈ ಅಲ್ಪವಾದ ಜೀವದ ಕರ್ತವ್ಯವು ಮುಗಿದಿರುವದು. ದೇವರು ದಯವುಳ್ಳವನು. ಈ ಸೇವಕನಮೇಲೆ ಅತನು ಅಪಾರವಾದ ಕರುಣೆಯನ್ನು ಮಾಡಿರುವನು. ಒಂದು ದುಡ್ಡಿಗೆ ಗತಿಯಿಲ್ಲದ ಫರಿದನು ಸಾಮ್ರಾಜ್ಯವನ್ನು ಹೊಂದಿರುವನು. ಈ ಅಲ್ಪನಿಂದ ದೇವರು ಪಠಾಣರ ಗೌರವವನ್ನು ಉದ್ಧರಿಸಿರುವನು. ಆದರೆ ಗೆಳೆಯಾ, ಮನುಷ್ಯನ ಆಶೆಗೆ ಅಂತವಿಲ್ಲ. ಇಷ್ಟೊಂದು ಸಂಪತ್ತಿಯಿದ್ದರೂ ನನ್ನಿಂದ ಲೋಭವನ್ನು ಹತ್ತಿಕ್ಕುವದಾಗಲಿಲ್ಲ. ಲೋಭಕ್ಕೆ ವಶನಾಗಿ ಧರ್ಮವನ್ನು ಕಾಯಲಿಲ್ಲ. ಗುರುವಿನ ಅಪ್ಪಣೆಯನ್ನು ಪಾಲಿಸಲಿಲ್ಲ.

ಬಾದಶಹನ ಕಣ್ಣಿಂದ ನೀರು ಸುರಿಯಲಾರಂಭಿಸಿತು. ಕುತ್ತಿಗೆ ಉಬ್ಬಿ ಬಂದಿತು ಅಗ ಆತನು ಕಣ್ಣುಮುಚ್ಚಿ ಕೈಜೋಡಿಸಿ ಗದ್ಗದಿತ ಕಂಠದಿಂದ ಗುರುವೇ, ಈ ಕೊನೆಯ ಸಮಯಕ್ಕೆ ಒಮ್ಮೆ ದರ್ಶನವನ್ನು ಕೊಡು, ನಂಬುಗೆಯನ್ನು ಕಾದುಕೊಳ್ಳಲಿಲ್ಲ ನಿನ್ನನ್ನು ಮರೆತು ಬಿಟ್ಟಿದ್ದೆನು. ಆದರೆ ನೀನು ಮಾತ್ರ ನನ್ನನ್ನು ಮರೆಯಬೇಡ. ವಿಷಯಲೋಭಕ್ಕೆ ಅಧೀನನಾಗಿ ನಿನ್ನ ಉಪದೇಶವನ್ನು ತಿರಸ್ಕರಿಸಿದೆನು. ಪಾಪಮಾರ್ಗದಲ್ಲಿ ಕಾಲಿಟ್ಟೆನು ಈ ಭೂಮಿಯು ಬಹುಕಾಲ ನನ್ನದೇ ಆಗುವದೆಂದು ತಿಳಿದಿದ್ದೆನು ಆದರೆ ಈ ಭೂಮಿಯು ಯಾರಿಗೂ ಸ್ಥಿರವಲ್ಲವೆಂಬದನ್ನು ತಿಳಿದಿರಲಿಲ್ಲ. ಯಾವನು ಈ ಭೂಮಿಯನ್ನು ನಿರ್ಮಿಸಿರುವನೋ ಅವನೇ ನಿಜವಾಗಿ ಇದರ ಒಡೆಯನು. ಮನುಷ್ಯನು ಸುಮ್ಮನೆ ನನ್ನದು ನನ್ನದು ಎನ್ನುತ್ತ ಸಾಯುವನು. ಮಹಾಪ್ರಯತ್ನದಿಂದ ಸಂಪಾದಿಸಿದ ಸಾಮ್ರಾಜ್ಯವನ್ನು ಸ್ವಲ್ಪ ವೇಳೆಯಲ್ಲಿ ಬಿಟ್ಟು ಹೋಗಬೇಕಾಗಿರುವದು. ಇದರ ಒಂದು ಕಣವನ್ನಾದರೂ ಸಂಗಡ ಒಯ್ಯಲಾದೀತೇ? ಹಾಯ್! ಈ ತಿಳಿವಳಿಕೆಯು ಮೊದಲೇ ಯಾಕೆ ಹುಟ್ಟಲಿಲ್ಲ !

ಬಾದಶಹನ ಕಣ್ಣಿನಿಂದ ಒಂದೇ ಸವನೆ ದಳದಳ ಕಣ್ಣೀರು ಸುರಿಯ ಹತ್ತಿದವು. ಸೇಲೀಮನು ಅಳುತ್ತ ಅಳುತ್ತ ಬಾದಶಹನ ಕಣ್ಣುಗಳನ್ನೊರಿಸುತ್ತಿದ್ದನು. ಈ ಸಮಯ ದಲ್ಲಿ ಶಿಬಿರದಿಂದ ದೂರದಲ್ಲಿ ಯಾರೋ ಒಂದು ಪದವನ್ನು ಹಾಡುವದು ಕೇಳಬಂದಿತು. ಅದುಃ—

**ಯತನೇ ಯತಕೇ ಧನ ಪಾಪೇ ಬಾಂಟಾಯಾ**
**ಮಿಲಿ ಸಬ ಪರಿಜನೇ ಖಾಯ।**
**ಮರಣಕೋ ಬೇರಿ ಕೋಯಿ ನ ಪುಚ್ಛಾ ಈ**
**ಕರಮ ಸಂಗೇ ಚಲಿ ಯಾಯ॥**

ಸಂಧ್ಯಾಕಾಲದ ಮಂದಮಾರುತವು ಈ ದಿವ್ಯಗಾನವನ್ನು ಹೊತ್ತುಕೊಂಡು ಬಂದು ಶಿಬಿರಕ್ಕೆ ಮುಟ್ಟಿಸುತ್ತಿತ್ತು. ಕಣ್ಣು ಮುಚ್ಚಿಕೊಂಡು ಬಿದ್ದುಕೊಂಡಿದ್ದ ಬಾದಶಹನ ಕಿವಿ ಯಲ್ಲಿ ಈ ಗಾನವು ಬಿದ್ದು ಆತನಿಗೆ ಮತ್ತಿಷ್ಟು ಸಂತಾಪವನ್ನುಂಟುಮಾಡಿತು. ಸೇಲೀಮನ ಮುಖವು ಗಂಭೀರವಾಯಿತು. ಖಾವಾಸಖಾನನು ಆಲೋಚನೆಯಲ್ಲಿ ಮಗ್ನನಾದನು.

ಆ ದಿವಸ ಹುಣ್ಣಿವೆ; ಕಿಡಿಕಿಯಿಂದ ಬೆಳ್ದಿಂಗಳು ಡೇರೆಯಲ್ಲಿ ಬಿದ್ದಿತ್ತು. ಬಾದ ಶಹನು ಸ್ನಿಗ್ಧದೃಷ್ಟಿಯಿಂದ ರಾತ್ರಿಯ ನಿಸರ್ಗದ ಕಡೆಗೆ ನೋಡಹತ್ತಿ ದೀರ್ಘಶ್ವಾಸ ವನ್ನು ಬಿಟ್ಟನು. ಆ ಶುಭ್ರವಾದ ಚಂದ್ರಾಲೋಕವನ್ನು ನೋಡುವಾಗ ಯಾರನ್ನೋ ಹುಡುಕುತ್ತಿರುವಂತೆ ತೋರುತ್ತಿತ್ತು. ಈ ಸಮಯದಲ್ಲಿ ಡೇರೆಯೊಳಗೆ ಎತ್ತರವಾದ ನಿಲ್ಕಿಕೆಯ ಒಬ್ಬ ಮನುಷ್ಯನ ನೆಳಲು ಬಿದ್ದಿತು. ಸೇಲೀಮನು ಉತ್ಕಂಠೆಯಿಂದ ಬಾಗಿಲ ಕಡೆಗೆ ನೋಡಿದನು. ನೋಡುತ್ತಿರುವಷ್ಟರಲ್ಲಿ ಶಾಹೇನಶಾನು ಡೇರೆಯನ್ನು ಹೊಕ್ಕನು ಅವನನ್ನು ನೋಡಿದೊಡನೆ ಸೇಲೀಮನು ಎದ್ದುನಿಂತನು. ಶಾಹೇನಶಾನು– "ಫರಿದ" ಎಂದು ಒದರಿದನು. ಭಯಚಕಿತವಾದ ಕರುವು ತಾಯಿಯನ್ನು ನೋಡುವಂತೆ ಬಾದ ಶಹನು ಆತನನ್ನು ಸ್ನೇಹದೃಷ್ಟಿಯಿಂದ ನೋಡಿದನು. ಆ ದೃಷ್ಟಿಯಲ್ಲಿ ಭಕ್ತಿಭಾವ– ಪಶ್ಚಾತ್ತಾಪಗಳು ಒಡೆದು ಕಾಣುತ್ತಿದ್ದವು. ಸರ್ವಸಂಗಪರಿತ್ಯಾಗ ಮಾಡಿದ ಆ ಫಕೀರ ನಿಗೂ ಕೂಡ ಆ ಕಷ್ಟಮಯ ಸ್ಥಿತಿಯನ್ನು ನೋಡಿದೊಡನೆ ವ್ಯಥೆಯಾಯಿತು.

ಆಗ ಬಾದಶಹನು ಮೆಲ್ಲನೆ ಸ್ವಾಮಿ, ಲೋಭಕ್ಕೆ ಅಧೀನನಾಗಿ ನಾನು ನಿನ್ನ ಉಪದೇಶವನ್ನು ಮರೆತಿದ್ದೆನು. ನಂಬುಗೆಯನ್ನು ಕಾಯಲಿಲ್ಲ. ರಾಜ್ಯವನ್ನು ಬಯಸಿ ನಾನು ಪಾಪದ ಹೊರೆಯನ್ನು ಮಾತ್ರ ಸಂಪಾದಿಸಿದೆನು. ರಾಜ್ಯವು ಇಲ್ಲಿಯೇ ಉಳಿ ಯಿತು. ಪಾಪದ ಹೊರೆಯನ್ನು ಮಾತ್ರ ಹೊತ್ತುಕೊಂಡು ಹೊರಟೆನು. ನಾನು ಧರ್ಮವನ್ನು ಕಾಪಾಡಲಿಲ್ಲ ನನ್ನನ್ನು ಈಗ ಯಾರು ಕಾಪಾಡುವರು? ಎಂದನು.

ಶಾಹೇನಶಾನು— ಮಗನೇ, ಇದೇನು ವಿಚಿತ್ರವಲ್ಲ. ಇದೇ ಮನುಷ್ಯ ಸ್ವಭಾವವು. ಮನುಷ್ಯನು ಕಾಮಕ್ರೋಧಾದಿಗಳ ಕೈಗೆ ಸಿಲುಕಿಬಿದ್ದು ಯಾವದು ನಿಲ್ಲಲಾರದೋ ಅದನ್ನೇ ನಿಲ್ಲಿಸಬೇಕೆಂದು ಬಯಸುತ್ತಾನೆ. ಯಾವದು ಕಡೆತನಕ ನಿಲ್ಲುವದೋ ಅದನ್ನು ತಿರಸ್ಕರಿಸುತ್ತಾನೆ. ನೀನೂ ಅದನ್ನೇ ಮಾಡಿರುವೆ. ಆದರೂ ನಿನಗೆ ಪಶ್ಚಾತ್ತಾಪವು ಹುಟ್ಟಿರುವದು. ಪಶ್ಚಾತ್ತಾಪವೆಂಬ ಬೆಂಕೆಯಿಂದ ನಿನ್ನ ಪಾಪವು ಸುಟ್ಟು ಹೋಗುವದು. ದೇವರ ದಯೆಯು ಅಪಾರವಾದದ್ದು. ದೇವರು ನಿನ್ನ ಮೇಲೆ ಕ್ಷಮೆ ಮಾಡುವನು.

ಬಾದಶಹನು ಮೆಲ್ಲನೆ ಉಸಿರು ಹಾಕಿದನು. ಒಂದೆರಡು ಹನಿಗಳು ಅವನ ಕಣ್ಣಿಂದ ಉದುರಿದವು.

ಆಗ ಆ ಫಕೀರನು ಮತ್ತೆ— ಮಗನೇ, ನೀನು ರಾಜಧರ್ಮವನ್ನು ಪಾಲಿಸಿರುತ್ತೀಯೆ. ನ್ಯಾಯವಾಗಿಯೂ, ನಿಷ್ಪಕ್ಷಪಾತವಾಗಿಯೂ ನಡೆದು ಹಿಂದುಸ್ತಾನದಲ್ಲಿ ಪಠಾಣರ ಗೌರವವನ್ನು ಹೆಚ್ಚಿಸಿರುವೆ. ಈ ಪುಣ್ಯದಿಂದ ನಿನಗೆ ಸದ್ಗತಿಯಾಗುವದು, ಎಂದನು.

ಬಾದಶಹನ ಮೋರೆಯ ಮೇಲೆ ಶಾಂತಿಯ ಚಿಹ್ನವು ತೋರಿತು. ಕ್ಷಣದಲ್ಲಿ ದೀರ್ಘನಿದ್ರೆಯನ್ನು ಹೊಂದಿದನು.

ಫಕೀರನು, ಮಹಾನಿದ್ರೆಯನ್ನು ಹೊಂದುತ್ತಿರುವ ಆ ಶಿಷ್ಯನ ತಲೆಯ ಮೇಲೆ ಪ್ರೀತಿಯುಕ್ತವಾದ ಆಶೀರ್ವಾದವೃಷ್ಟಿಯನ್ನು ಮಾಡಿ ಅಲ್ಲಿಂದ ಹೊರಟು ಹೋಗಿ ಕಾಣದಂತಾದನು.



ಪ್ರೆಸ್:— ವಿಜಯ ಮುದ್ರಾಲಯ ಧಾರವಾಡ.
ಮುದ್ರಕ:— ಅಣ್ಣಾಚಾರ್ಯ ಬಾಳಾಚಾರ್ಯ ಹೊಸಕೇರಿ.
ಪ್ರಕಾಶಕ:— ಮಹಾದೇವ ಪ್ರಭಾಕರ ಪೂಜಾರ ಇವರು ಧಾರವಾಡ
ಲೈನಬಜಾರದಲ್ಲಿರುವ ತಮ್ಮ ಮನೆಯಲ್ಲಿ ಪ್ರಸಿದ್ಧಿಸಿದರು.

---

ಪ್ರಥಮಾವೃತ್ತಿ:— ೧೯೧೪
ದ್ವಿತೀಯಾವೃತ್ತಿ:— ೧೯೩೮